KA / BG - GPO/ 2515 /WPP-47/ 2009 - 2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಮಾರ್ಚ್ ೧೫, ೨೦೧೧ (ಫಾಲ್ಗುಣ ೨೪, ಶಕ ವರ್ಷ ೧೯೩೨) | ನಂ. ೩೧೨ |
|---|---|---|

**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕವಿಪ:ಶಾರಶಾ:ವಿಪವಿ–05:2011, ಬೆಂಗಳೂರು, ದಿನಾಂಕ: 15ನೇ ಮಾರ್ಚ್, 2011**

ಈ ಮುಂದಿನ ವಿಧೇಯಕವನ್ನು ವಿಧಾನ ಪರಿಷತ್ತಿನಲ್ಲಿ ದಿನಾಂಕ: 15ನೇ ಮಾರ್ಚ್, 2011 ರಂದು ಮಂಡಿಸಲಾಯಿತು.

**ಕರ್ನಾಟಕ ವಿಧಾನ ಪರಿಷತ್ತು**

**ನೂರ ಹದಿನಾಲ್ಕನೇ ಅಧಿವೇಶನ**

**(ಮುಂದುವರೆದ ಉಪವೇಶನಗಳು)**

## ಕರ್ನಾಟಕ ಸಾರ್ವಜನಿಕ ನ್ಯಾಸಗಳ ವಿಧೇಯಕ, 2011

**(2011ರ ವಿಧಾನ ಪರಿಷತ್ತಿನ ವಿಧೇಯಕ ಸಂಖ್ಯೆ – 5)**

ಕರ್ನಾಟಕ ರಾಜ್ಯದಲ್ಲಿ ಸಾರ್ವಜನಿಕ ಮತ್ತು ಧರ್ಮಾದಾಯ ನ್ಯಾಸಗಳ ಆಡಳಿತವನ್ನು ನಿಯಂತ್ರಿಸುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ರಾಜ್ಯದಲ್ಲಿ ಸಾರ್ವಜನಿಕ ಮತ್ತು ಧರ್ಮಾದಾಯ ನ್ಯಾಸಗಳ ಆಡಳಿತವನ್ನು ನಿಯಂತ್ರಿಸುವುದಕ್ಕಾಗಿ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**ಅಧ್ಯಾಯ – I**

**ಪ್ರಾರಂಭಿಕ**

**1. ಸಂಕ್ಷಿಪ್ತ ಹೆಸರು, ವ್ಯಾಪ್ತಿ, ಪ್ರಾರಂಭ ಮತ್ತು ಅನ್ವಯ.–** (1) ಈ ಅಧಿನಿಯಮವನ್ನು ಕರ್ನಾಟಕ ಸಾರ್ವಜನಿಕ ನ್ಯಾಸಗಳ ಅಧಿನಿಯಮ, 2011 ಎಂದು ಕರೆಯತಕ್ಕದ್ದು.

(2) ಇದು ಸಮಗ್ರ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗತಕ್ಕದ್ದು.

(3) ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಈ ಅಧಿನಿಯಮದ ಉಪಬಂಧಗಳು ಜಾರಿಗೆ ಬರತಕ್ಕ ದಿನಾಂಕವನ್ನು ನಿರ್ದಿಷ್ಟಪಡಿಸಬಹುದು.

(4) ಈ ಅಧಿನಿಯಮವು,–

(i) ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ (2001 ರ ಕರ್ನಾಟಕ ಅಧಿನಿಯಮ 33) ಅಡಿಯಲ್ಲಿ ನಿಯಂತ್ರಿಸಲ್ಪಡುವ ಹಿಂದೂ ಧಾರ್ಮಿಕ ಸಂಸ್ಥೆಗಳಿಗೆ ಮತ್ತು ಹಿಂದೂ ಧರ್ಮಾದಾಯ ದತ್ತಿಗಳಿಗೆ; ಮತ್ತು

(ii) ವಕ್ಫ್‌ಗಳಿಗೆ,

– ಅನ್ವಯವಾಗತಕ್ಕದ್ದಲ್ಲ.

**2. ಪರಿಭಾಷೆಗಳು.– (1)** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಉಪ ಸಾರ್ವಜನಿಕ ನ್ಯಾಸ ಆಯುಕ್ತ" ಎಂದರೆ, 4ನೇ ಪ್ರಕರಣದ ಅಡಿಯಲ್ಲಿ ನೇಮಕಗೊಂಡ ಉಪ ಸಾರ್ವಜನಿಕ ನ್ಯಾಸ ಆಯುಕ್ತ;

(ಬಿ) "ಪರಿಶೀಲಕ" ಎಂದರೆ, 5ನೇ ಪ್ರಕರಣದ ಅಡಿಯಲ್ಲಿ ನೇಮಕಗೊಂಡ ಪರಿಶೀಲಕ;

(ಸಿ) "ನ್ಯಾಸದ ಲಿಖಿತ ಪತ್ರ" ಎಂದರೆ, ನ್ಯಾಸದ ಕರ್ತನು ಯಾವ ಲಿಖಿತ ಪತ್ರದ ಮೂಲಕ ನ್ಯಾಸವನ್ನು ಸೃಜಿಸಿದ್ದಾನೆಯೋ ಆ ಲಿಖಿತ ಪತ್ರ ಅಥವಾ ಸಂಘಗಳ ನೋಂದಣಿ ಅಧಿನಿಯಮ, 1960ರ (1960ರ ಕರ್ನಾಟಕ ಅಧಿನಿಯಮ 17) ಅಡಿಯಲ್ಲಿ ನೋಂದಾಯಿತವಾದ ಒಂದು ಸಂಘದ ಸಂಸ್ಥಾಪನಾ ಪತ್ರ ಮತ್ತು ನಿಯಮಗಳು ಹಾಗೂ ವಿನಿಯಮಗಳು ಮತ್ತು ಸಕ್ಷಮ ಪ್ರಾಧಿಕಾರವು ರೂಪಿಸಿದ ಯಾವುದೇ ಯೋಜನೆಯನ್ನು ಅದು ಒಳಗೊಳ್ಳುತ್ತದೆ;

(ಡಿ) "ವ್ಯವಸ್ಥಾಪಕ" ಎಂದರೆ, (ನ್ಯಾಸಧಾರಿಯ ಹೊರತಾಗಿ) ಒಬ್ಬನೇ ಅಥವಾ ಇತರ ವ್ಯಕ್ತಿಯೊಡನೆ ಅಥವಾ ವ್ಯಕ್ತಿಗಳೊಡನೆ ತತ್ಕಾಲದಲ್ಲಿ ಯಾವುದೇ ಸಾರ್ವಜನಿಕ ನ್ಯಾಸದ ಸ್ವತ್ತಿನ ಆಡಳಿತವನ್ನು ನಡೆಸುತ್ತಿರುವ ಯಾವೊಬ್ಬ ವ್ಯಕ್ತಿ ಮತ್ತು ಜಾರಿಯಲ್ಲಿರುವ ಯಾವುದೇ ಕಾನೂನಿನ ಅಡಿಯಲ್ಲಿ ನೋಂದಾಯಿತವಾದ ಸಂಘದ ಸಂದರ್ಭದಲ್ಲಿ, ಸಂಘದ ಸ್ವತ್ತು ನ್ಯಾಸಧಾರಿಯಲ್ಲಿ ನಿಹಿತವಾಗಿರಲಿ ಅಥವಾ ನಿಹಿತವಾಗಿಲ್ಲದಿರಲಿ, ಅದರ ಆಡಳಿತ ಮಂಡಳಿಯನ್ನು ಅದು ಒಳಗೊಳ್ಳುತ್ತದೆ;

(ಇ) "ಹಿತಾಸಕ್ತಿ ಹೊಂದಿರುವ ವ್ಯಕ್ತಿ" ಎಂಬುದು ,–

(i) ಸಂಘಗಳ ನೋಂದಣಿ ಅಧಿನಿಯಮ, 1960ರ (1960ರ ಕರ್ನಾಟಕ ಅಧಿನಿಯಮ 17) ಅಡಿಯಲ್ಲಿ ನೋಂದಾಯಿತವಾದ ಸಂಘದ ಸಂದರ್ಭದಲ್ಲಿ, ಅಂಥ ಸಂಘದ ಯಾವೊಬ್ಬ ಸದಸ್ಯನನ್ನು;

(ii) ಇತರ ಯಾವುದೇ ಸಾರ್ವಜನಿಕ ನ್ಯಾಸಗಳ ಸಂದರ್ಭದಲ್ಲಿ, ಯಾವೊಬ್ಬ ನ್ಯಾಸಧಾರಿ ಅಥವಾ ಫಲಾನುಭವಿಯನ್ನು; ಮತ್ತು

(iii) ಶೈಕ್ಷಣಿಕ ಸಂಸ್ಥೆಯ ಸಂದರ್ಭದಲ್ಲಿ, ಅಂಥ ಸಂಸ್ಥೆಯ ಒಬ್ಬ ಸದಸ್ಯನನ್ನು,

–ಒಳಗೊಳ್ಳುತ್ತದೆ.

(ಎಫ್) "ಸಾರ್ವಜನಿಕ ಭದ್ರತೆಗಳು" ಎಂದರೆ,–

(i) ಕೇಂದ್ರ ಸರ್ಕಾರದ ಅಥವಾ ಯಾವುದೇ ರಾಜ್ಯ ಸರ್ಕಾರದ ಭದ್ರತೆಗಳು;

(ii) ಕೇಂದ್ರ ಸರ್ಕಾರವು ಅಥವಾ ಯಾವುದೇ ರಾಜ್ಯ ಸರ್ಕಾರವು, ಯಾವುದರ ಆಧಾರದ ಮೇಲೆ ಬಡ್ಡಿ ಅಥವಾ ಡಿವಿಡೆಂಟ್‌ನ್ನು ಘೋಷಿಸುತ್ತದೆಯೋ, ಆ ರೈಲ್ವೆ ಅಥವಾ ಇತರ ಕಂಪನಿಗಳ ಸ್ಟಾಕುಗಳು, ಡಿಬೆಂಚರುಗಳು ಅಥವಾ ಷೇರುಗಳು;

(iii) ಕೇಂದ್ರ ಅಥವಾ ರಾಜ್ಯ ವಿಧಾನ ಮಂಡಲದ ಒಂದು ಅಧಿನಿಯಮದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಯಾವುದೇ ಸ್ಥಳೀಯ ಪ್ರಾಧಿಕಾರದ ಮೂಲಕ ಅಥವಾ ಅದರ ಪರವಾಗಿ ಹಣಕ್ಕಾಗಿ ನೀಡಲಾದ ಡಿಬೆಂಚರುಗಳು ಅಥವಾ ಇತರ ಭದ್ರತೆಗಳು; ಮತ್ತು

(iv) ರಾಜ್ಯ ಸರ್ಕಾರವು ಮಾಡಿದ ಆದೇಶದ ಮೂಲಕ ಸ್ಪಷ್ಟವಾಗಿ ಪ್ರಾಧಿಕರಿಸಿದ ಒಂದು ಭದ್ರತೆ;

(ಜಿ) "ಸಾರ್ವಜನಿಕ ನ್ಯಾಸ" ಎಂದರೆ, ಸಾರ್ವಜನಿಕ ಅಥವಾ ಧರ್ಮಾದಾಯ ಉದ್ದೇಶಕ್ಕಾಗಿ ಅಥವಾ ಅವೆರಡಕ್ಕಾಗಿ ಸ್ಪಷ್ಟವಾಗಿ ಅಥವಾ ರಚನಾತ್ಮಕವಾಗಿ ರಚಿಸಿದ ನ್ಯಾಸ ಮತ್ತು ಅದರಲ್ಲಿ ಅಗೇರಿಯಾ (Agiary) ಅಥವಾ ಇತರ ಸಾರ್ವಜನಿಕ ಸ್ಥಳ, ಧರ್ಮಾದಾಯ ಅಥವಾ ಯಾವುದೇ ಇತರ ಧರ್ಮಾದಾಯ ನ್ಯಾಸ ಮತ್ತು ಧರ್ಮಾದಾಯ ಉದ್ದೇಶಕ್ಕಾಗಿ ಮತ್ತು ಜಾರಿಯಲ್ಲಿರುವ ಯಾವುದೇ ಕಾನೂನಿನ ಅಡಿಯಲ್ಲಿ ನೋಂದಾಯಿತವಾದ ಸಂಘವು ಒಳಗೊಳ್ಳುತ್ತದೆ;

(ಎಚ್) "ಸಾರ್ವಜನಿಕ ನ್ಯಾಸ ಆಯೋಗ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಚಿಸಲಾದ ಕರ್ನಾಟಕ ಸಾರ್ವಜನಿಕ ನ್ಯಾಸ ಆಯೋಗ

(ಐ) "ನ್ಯಾಸಧಾರಿ" ಎಂದರೆ, ನ್ಯಾಸದ ಸ್ವತ್ತು ಯಾರಲ್ಲಿ ನಿಹಿತವಾಗಿರುವುದೋ ಆ ವ್ಯಕ್ತಿ ಅಥವಾ ಇತರ ವ್ಯಕ್ತಿಗಳು ಜೊತೆಗೂಡಿದ್ದರೆ ಅವರು ಮತ್ತು ಇದು ವ್ಯವಸ್ಥಾಪಕನನ್ನು ಒಳಗೊಳ್ಳುತ್ತದೆ;

(2) ಈ ಅಧಿನಿಯಮದಲ್ಲಿ ಬಳಸಿದ, ಆದರೆ ಪರಿಭಾಷಿಸಿರದ ಮತ್ತು ಭಾರತ ನ್ಯಾಸ ಅಧಿನಿಯಮ, 1882 ರಲ್ಲಿ ಪರಿಭಾಷಿಸಿದ ಪದಗಳು ಮತ್ತು ಪದಾವಳಿಗಳು ಭಾರತ ನ್ಯಾಸ ಅಧಿನಿಯಮ, 1882 ರಲ್ಲಿ ಅವುಗಳಿಗೆ ಕೊಡಲಾದ ಅರ್ಥಗಳನ್ನೇ ಹೊಂದಿರತಕ್ಕದ್ದು.

## ಅಧ್ಯಾಯ – II

## ಸಾರ್ವಜನಿಕ ನ್ಯಾಸ ಆಯೋಗದ ರಚನೆ, ಅಧಿಕಾರಿಗಳು ಮತ್ತು ಸಿಬ್ಬಂದಿ

**3. ಸಾರ್ವಜನಿಕ ನ್ಯಾಸ ಆಯೋಗದ ರಚನೆ.–** (1) ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆ ಮೂಲಕ, ಸರ್ಕಾರವು ನೇಮಕ ಮಾಡಬಹುದಾದ ಒಬ್ಬರು ನ್ಯಾಯಿಕ ಸದಸ್ಯರು ಅಧ್ಯಕ್ಷರಾಗಿರತಕ್ಕದ್ದು ಮತ್ತು ಒಬ್ಬರು ಆಡಳಿತ ಸದಸ್ಯರು ಇರುವ "ಕರ್ನಾಟಕ ರಾಜ್ಯ ಸಾರ್ವಜನಿಕ ನ್ಯಾಸ ಆಯೋಗ" (ಇಲ್ಲಿ ಇನ್ನು ಮುಂದೆ ಸಾರ್ವಜನಿಕ ನ್ಯಾಸ ಆಯೋಗ ಎಂದು ಉಲ್ಲೇಖಿಸಲಾಗಿದೆ) ಎಂದು ಕರೆಯಲಾಗುವ ಒಂದು ಆಯೋಗವನ್ನು ರಚಿಸತಕ್ಕದ್ದು.

(2) ರಾಜ್ಯ ಸರ್ಕಾರವು ನೇಮಕ ಮಾಡಿದ ಗ್ರೂಪ್–ಎ ಹಿರಿಯ ವೇತನ ಶ್ರೇಣಿಯ ಅಧಿಕಾರಿಯ ದರ್ಜೆಗಿಂತ ಕಡಿಮೆಯದಲ್ಲದ ದರ್ಜೆಯಲ್ಲಿರುವ ಒಬ್ಬ ಅಧಿಕಾರಿಯು ಆಯೋಗದ ಕಾರ್ಯದರ್ಶಿಯಾಗಿರತಕ್ಕದ್ದು.

(3) ಸಾರ್ವಜನಿಕ ನ್ಯಾಸ ಆಯೋಗದ ಕೇಂದ್ರ ಕಾರ್ಯ ಸ್ಥಾನವು ಬೆಂಗಳೂರಿನಲ್ಲಿರತಕ್ಕದ್ದು.

(4) ಒಬ್ಬ ವ್ಯಕ್ತಿಯು,–

(ಎ) ಉಚ್ಚ ನ್ಯಾಯಾಲಯದ ನ್ಯಾಯಾಧೀಶನ ಹುದ್ದೆಯನ್ನು ಹೊಂದಿದ್ದ ಹೊರತು ಅಥವಾ ಭಾರತ ಸಂವಿಧಾನದ 217(2)ನೇ ಅನುಚ್ಛೇದದ ಅರ್ಥ ವ್ಯಾಪ್ತಿಯೊಳಗೆ ಉಚ್ಚ ನ್ಯಾಯಾಲಯದ ನ್ಯಾಯಾಧೀಶನಾಗಿ ನೇಮಕಗೊಳ್ಳಲು ಅರ್ಹನಾಗಿರುವ ಹೊರತು, ಒಬ್ಬ ನ್ಯಾಯಿಕ ಸದಸ್ಯನಾಗಿ;

(ಬಿ) ಹಿರಿಯ ಐಎಎಸ್ ಕೇಡರಿನ ಅಧಿಕಾರಿಯಾಗಿರುವ ಮತ್ತು ಕರ್ನಾಟಕ ಸರ್ಕಾರದ ಕಾರ್ಯದರ್ಶಿಯ ಹುದ್ದೆಯನ್ನು ಅಥವಾ ಕೇಂದ್ರ ಅಥವಾ ರಾಜ್ಯ ಸರ್ಕಾರದ ಅಥವಾ ರಾಜ್ಯ ಸರ್ಕಾರದ ಅಡಿಯಲ್ಲಿ ಕರ್ನಾಟಕ ಸರ್ಕಾರದ ಕಾರ್ಯದರ್ಶಿಯ ವೇತನ ಶ್ರೇಣಿಗಿಂತ ಕಡಿಮೆ ಇಲ್ಲದ ವೇತನ ಶ್ರೇಣಿಯನ್ನು ಹೊಂದಿರುವಂಥ ಹುದ್ದೆಯನ್ನು ಕನಿಷ್ಠ ಎರಡು ವರ್ಷಗಳ ಅವಧಿಗೆ ಧಾರಣ ಮಾಡಿದ್ದ ಹೊರತು, ಆಡಳಿತ ಸದಸ್ಯನಾಗಿ,

– ಸಾರ್ವಜನಿಕ ನ್ಯಾಸ ಆಯೋಗಕ್ಕೆ ನೇಮಕಗೊಳ್ಳಲು ಅರ್ಹನಾಗಿರತಕ್ಕದ್ದಲ್ಲ:

ಪರಂತು, ಸೇವೆಯಲ್ಲಿರುವ ಸರ್ಕಾರಿ ಅಧಿಕಾರಿಯು ಆಡಳಿತ ಸದಸ್ಯನಾಗಿ ನೇಮಕಗೊಂಡಿರುವಲ್ಲಿ, ಅವನು ಆಡಳಿತ ಸದಸ್ಯನಾಗಿ ಪ್ರಭಾರವನ್ನು ವಹಿಸಿಕೊಂಡ ದಿನಾಂಕದಂದು ಅವನು ಸೇರಿದ್ದ ಸೇವೆಯಿಂದ ನಿವೃತ್ತನಾಗಿದ್ದಾನೆಂದು ಭಾವಿಸತಕ್ಕದ್ದು, ಆದರೆ ಆಡಳಿತ ಸದಸ್ಯನಾಗಿ ಇರುವ ಅವನ ತರುವಾಯದ ಸೇವೆಯನ್ನು, ಅವನ ಇಚ್ಛೆಗೆ ಅನುಸಾರವಾಗಿ ನಿವೃತ್ತಿ ನಂತರದ ಮರು ನಿಯೋಜನೆ ಎಂದು ಪರಿಗಣಿಸಿ ಅವನು ಈ ಹಿಂದೆ ಸೇರಿದ್ದ ಸೇವೆಯಲ್ಲಿನ ನಿವೃತ್ತಿ ವೇತನ ಮತ್ತು ಇತರ ನಿವೃತ್ತಿ ಪ್ರಯೋಜನಗಳನ್ನು ಲೆಕ್ಕ ಹಾಕತಕ್ಕದ್ದು.

(5) ಸಾರ್ವಜನಿಕ ನ್ಯಾಸ ಆಯೋಗವು, ರಾಜ್ಯ ಸರ್ಕಾರದ ಸಾಮಾನ್ಯ ಅಥವಾ ವಿಶೇಷ ಆದೇಶಗಳಿಗೆ ಒಳಪಟ್ಟು, ಈ ಅಧಿನಿಯಮದ ಉಪಬಂಧಗಳ ಮೂಲಕ ಅಥವಾ ಅದರ ಅಡಿಯಲ್ಲಿ ಪ್ರದತ್ತವಾಗಿರುವ ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಕರ್ತವ್ಯಗಳನ್ನು ಹಾಗೂ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

(6) ಸಾರ್ವಜನಿಕ ನ್ಯಾಸ ಆಯೋಗದ ಸದಸ್ಯನು, ತಾನು ಪದವನ್ನು ವಹಿಸಿಕೊಂಡ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಪದ ಧಾರಣ ಮಾಡತಕ್ಕದ್ದು.

ಪರಂತು, ಯಾವೊಬ್ಬ ಸದಸ್ಯನಿಗೆ ಅರವತ್ತೈದು ವರ್ಷ ವಯಸ್ಸು ತುಂಬಿದ ತರುವಾಯ ಅವನು ಆ ಪದವನ್ನು ಹೊಂದಿರತಕ್ಕದ್ದಲ್ಲ.

(7) ಸಾರ್ವಜನಿಕ ನ್ಯಾಸ ಆಯೋಗದ ಸದಸ್ಯನು ಸರ್ಕಾರಕ್ಕೆ ಬರೆದ ಲಿಖಿತ ನೋಟೀಸಿನ ಮೂಲಕ ತನ್ನ ಪದಕ್ಕೆ ರಾಜೀನಾಮೆ ನೀಡಬಹುದು:

ಪರಂತು, ಆ ಸದಸ್ಯನು, ತನ್ನ ಪದವನ್ನು ತ್ಯಜಿಸಲು ಸರ್ಕಾರವು ಕೂಡಲೇ ಅನುಮತಿಸಿದ ಹೊರತು, ಅವನು ಅಂಥ ನೋಟೀಸನ್ನು ಸ್ವೀಕರಿಸಿದ ದಿನಾಂಕದಿಂದ ಮೂರು ತಿಂಗಳು ಮುಕ್ತಾಯವಾಗುವವರೆಗೆ ಅಥವಾ ಅವನ ಉತ್ತರಾಧಿಕಾರಿಯಾಗಿ ವಿದ್ಯುಕ್ತವಾಗಿ ನೇಮಕಗೊಂಡ ಒಬ್ಬ ವ್ಯಕ್ತಿಯು ಪದಧಾರಣ ಮಾಡುವವರೆಗೆ ಅವನ ಪದಕ್ಕೆ ಸೇರುವವರೆಗೆ ಅಥವಾ ಅವನ ಪದಾವಧಿಯು ಮುಕ್ತಾಯವಾಗುವವರೆಗೆ, ಇವುಗಳಲ್ಲಿ ಯಾವುದು ಮುಂಚಿತವೋ ಅಲ್ಲಿಯವರೆಗೆ ಅವನು ಪದದಲ್ಲಿರುವುದು ಮುಂದುವರೆಯತಕ್ಕದ್ದು.

(8) ಒಬ್ಬ ಸದಸ್ಯನನ್ನು ದುರ್ನಡತೆಯ ಅಥವಾ ಅಸಾಮರ್ಥ್ಯದ ಕಾರಣದ ಮೇಲೆ, ಅವನ ವಿರುದ್ಧ ಇರುವ ದೋಷಾರೋಪಗಳ ಬಗ್ಗೆ ತಿಳಿಸಿ ವಿಚಾರಣೆ ಮಾಡಿದ ತರುವಾಯ ಮತ್ತು ಅಂಥ ದೋಷಾರೋಪಗಳಿಗೆ ಸಂಬಂಧಿಸಿದಂತೆ ಅಹವಾಲು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ನೀಡಿದ ತರುವಾಯ, ಸರ್ಕಾರವು ಆದೇಶ ಮಾಡಿದ ಹೊರತು, ಅವನ ಪದದಿಂದ ತೆಗೆದು ಹಾಕತಕ್ಕದ್ದಲ್ಲ.

(9) ಆಡಳಿತ ಸದಸ್ಯನಿಗೆ ಸಂದಾಯ ಮಾಡಬೇಕಾದ ಸಂಬಳ ಮತ್ತು ಭತ್ಯೆಗಳು, ಅವನ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು (ನಿವೃತ್ತಿ ವೇತನ, ಉಪದಾನ ಮತ್ತು ಇತರ ನಿವೃತ್ತಿ ಪ್ರಯೋಜನಗಳೂ ಸೇರಿ) ಸರ್ಕಾರವು ನಿಯಮಿಸಬಹುದಾದಂತೆ ಇರತಕ್ಕದ್ದು:

ಪರಂತು, ಸದಸ್ಯನ ಸಂಬಳ ಮತ್ತು ಭತ್ಯೆಗಳನ್ನಾಗಲಿ ಅಥವಾ ಸೇವಾ ನಿಬಂಧನೆಗಳು ಮತ್ತು ಷರತ್ತುಗಳನ್ನಾಗಲೀ ಅವನ ನೇಮಕಾತಿಯ ತರುವಾಯ ಅವನಿಗೆ ಅನಾನುಕೂಲವಾಗುವಂತೆ ಬದಲಾಯಿಸತಕ್ಕದ್ದಲ್ಲ.

4. **ಉಪ ಸಾರ್ವಜನಿಕ ನ್ಯಾಸ ಆಯುಕ್ತರು.**–(1) ರಾಜ್ಯ ಸರ್ಕಾರವು, ಅವಶ್ಯಕವೆಂದು ಭಾವಿಸಬಹುದಾದಂತೆ, ಪ್ರತಿಯೊಂದು ಪ್ರದೇಶಕ್ಕಾಗಿ ಅಥವಾ ಅಂಥ ಸಾರ್ವಜನಿಕ ನ್ಯಾಸಗಳ ವರ್ಗಕ್ಕಾಗಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ಅಥವಾ ಜಿಲ್ಲಾ ನ್ಯಾಯಾಧೀಶರಾಗಿ ನೇಮಕಗೊಳ್ಳಲು ಅರ್ಹರಾಗಿರುವ ವ್ಯಕ್ತಿಯನ್ನು ಉಪ ಸಾರ್ವಜನಿಕ ನ್ಯಾಸ ಆಯುಕ್ತ ಎಂದು ನೇಮಕ ಮಾಡಬಹುದು.

(2) ಉಪ ಸಾರ್ವಜನಿಕ ನ್ಯಾಸ ಆಯುಕ್ತರು, ಈ ಅಧಿನಿಯಮದ ಉಪಬಂಧಗಳ ಮೂಲಕ ಅಥವಾ ಅದರಡಿಯಲ್ಲಿ ಉಪಬಂಧಿಸಬಹುದಾದಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಕರ್ತವ್ಯಗಳನ್ನು ಹಾಗೂ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

5. **ಸಾರ್ವಜನಿಕ ನ್ಯಾಸ ಆಯೋಗದ ಅಧಿಕಾರಿಗಳು ಮತ್ತು ಸಿಬ್ಬಂದಿ.**– ಈ ಅಧಿನಿಯಮದ ಉಪಬಂಧಗಳನ್ನು ನಿರ್ವಹಿಸುವ ಉದ್ದೇಶಕ್ಕಾಗಿ, ರಾಜ್ಯ ಸರ್ಕಾರವು, ಪರಿಶೀಲಕರನ್ನು ಮತ್ತು ಇತರ ಅಧೀನ ಅಧಿಕಾರಿಗಳನ್ನು ನೇಮಕಾತಿ ಮಾಡಬಹುದು ಮತ್ತು ಅವರಿಗೆ ನಿಯಮಿಸಬಹುದಾದಂಥ ಅಧಿಕಾರಗಳನ್ನು, ಕರ್ತವ್ಯಗಳನ್ನು ಹಾಗೂ ಪ್ರಕಾರ್ಯಗಳನ್ನು ವಹಿಸಿಕೊಡಬಹುದು. ಅಂಥ ಅಧಿಕಾರಿಗಳ ನೇಮಕಾತಿ ವಿಧಾನ ಮತ್ತು ಸೇವಾ ನಿಬಂಧನೆಗಳು ನಿಯಮಿಸಬಹುದಾದಂತೆ ಇರತಕ್ಕದ್ದು.

6. **ಸಾರ್ವಜನಿಕ ನ್ಯಾಸ ಆಯೋಗವು ಮತ್ತು ಇತರೆ ಅಧಿಕಾರಿಗಳು ರಾಜ್ಯ ಸರ್ಕಾರದ ನೌಕರರಾಗಿರತಕ್ಕದ್ದು.**– ಈ ಅಧಿನಿಯಮದ ಅಡಿಯಲ್ಲಿ ನೇಮಕಗೊಂಡ ಸಾರ್ವಜನಿಕ ನ್ಯಾಸ ಆಯೋಗದ ಅಧ್ಯಕ್ಷರು ಮತ್ತು ಸದಸ್ಯರು, ಉಪ ಸಾರ್ವಜನಿಕ ನ್ಯಾಸ ಆಯುಕ್ತರು, ಕಾರ್ಯದರ್ಶಿಯವರು, ಪರಿಶೀಲಕರು ಮತ್ತು ಇತರ ಅಧೀನ ಅಧಿಕಾರಿಗಳು ಹಾಗೂ ನೌಕರರು ರಾಜ್ಯ ಸರ್ಕಾರದ ನೌಕರರಾಗಿರತಕ್ಕದ್ದು ಮತ್ತು ಅವರು ತಮ್ಮ ವೇತನ ಹಾಗೂ ಭತ್ಯೆಗಳನ್ನು ರಾಜ್ಯದ ಸಂಚಿತ ನಿಧಿಯಿಂದ ಪಡೆಯತಕ್ಕದ್ದು.

7. **ಸಾರ್ವಜನಿಕ ನ್ಯಾಸ ಆಯೋಗದ ಅಧ್ಯಕ್ಷರು, ಸದಸ್ಯರು ಮುಂತಾದವರ ವೇತನ, ಭತ್ಯೆಗಳ ವೆಚ್ಚವನ್ನು ಸಾರ್ವಜನಿಕ ನ್ಯಾಸಗಳ ಆಡಳಿತ ನಿಧಿಯಿಂದ ಸರ್ಕಾರಕ್ಕೆ ಸಂದಾಯ ಮಾಡತಕ್ಕದ್ದು.**– ಈ ಅಧಿನಿಯಮದ ಅಡಿಯಲ್ಲಿ ನೇಮಕಗೊಂಡ ಸಾರ್ವಜನಿಕ ನ್ಯಾಸ ಆಯೋಗದ ಅಧ್ಯಕ್ಷರ ಮತ್ತು ಸದಸ್ಯರ, ಉಪ ಸಾರ್ವಜನಿಕ ನ್ಯಾಸ ಆಯುಕ್ತರ, ಕಾರ್ಯದರ್ಶಿಯವರ, ಪರಿಶೀಲಕರ ಮತ್ತು ಇತರ ಅಧೀನ ಅಧಿಕಾರಿಗಳ ಹಾಗೂ ನೌಕರರ ವೇತನ, ರಜೆ ಹಾಗೂ ಇತರೆ ಬಾಬುಗಳಿಗಾಗಿ, ರಾಜ್ಯ ಸರ್ಕಾರವು ನಿರ್ಧರಿಸಬಹುದಾದ ಅಂಥ ವೆಚ್ಚವನ್ನು ಸಾರ್ವಜನಿಕ ನ್ಯಾಸಗಳ ಆಡಳಿತ ನಿಧಿಯಿಂದ ರಾಜ್ಯ ಸರ್ಕಾರಕ್ಕೆ ಪ್ರತಿ ವರ್ಷ ಸಂದಾಯ ಮಾಡತಕ್ಕದ್ದು.

8. **ಅಧಿಕಾರಗಳ ಪ್ರತ್ಯಾಯೋಜನೆ.**– (1) ರಾಜ್ಯ ಸರ್ಕಾರವು, ನಿಯಮಗಳ ರಚನಾಧಿಕಾರವನ್ನು ಹೊರತುಪಡಿಸಿ, ತಾನು ಸೂಕ್ತವೆಂದು ಭಾವಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು, ಸಾರ್ವಜನಿಕ ನ್ಯಾಸ ಆಯೋಗಕ್ಕೆ ಅಥವಾ ಯಾವೊಬ್ಬ ಇತರ ಅಧಿಕಾರಿಗೆ ಈ ಅಧಿನಿಯಮದ ಅಡಿಯಲ್ಲಿಯ ತನ್ನ ಯಾವುವೇ ಅಧಿಕಾರಗಳು ಅಥವಾ ಪ್ರಕಾರ್ಯಗಳನ್ನು ಪ್ರತ್ಯಾಯೋಜಿಸಬಹುದು.

(2) ರಾಜ್ಯ ಸರ್ಕಾರವು, ಈ ಅಧಿನಿಯಮದ ಅಡಿಯಲ್ಲಿ ನೇಮಕವಾದ ಯಾವೊಬ್ಬ ನಿರ್ದಿಷ್ಟ ಅಧಿಕಾರಿಯು ಚಲಾಯಿಸತಕ್ಕ ಯಾವುವೇ ಅಧಿಕಾರಗಳನ್ನು ಮತ್ತು ನಿರ್ವಹಿಸಬೇಕಾದ ಕರ್ತವ್ಯಗಳನ್ನು ಅಥವಾ ಪ್ರಕಾರ್ಯಗಳನ್ನು, ತಾನು ಸೂಕ್ತವೆಂದು ಭಾವಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು, ಯಾವೊಬ್ಬ ಇತರ ಅಧಿಕಾರಿಯು ಚಲಾಯಿಸಬಹುದೆಂದು ಅಥವಾ ನಿರ್ವಹಿಸಬಹುದೆಂದು ಸಹ ನಿರ್ದೇಶಿಸಬಹುದು.

## ಅಧ್ಯಾಯ – III

## ಸಾರ್ವಜನಿಕ ನ್ಯಾಸದ ಉದ್ದೇಶಗಳು ಮತ್ತು ಕೆಲವು ಸಾರ್ವಜನಿಕ ನ್ಯಾಸಗಳ ಸಿಂಧುತ್ವ

9. **ಸಾರ್ವಜನಿಕ ನ್ಯಾಸದ ಉದ್ದೇಶಗಳು.**– (1) ಈ ಅಧಿನಿಯಮದ ಉದ್ದೇಶಗಳಿಗಾಗಿ, ಒಂದು ಸಾರ್ವಜನಿಕ ನ್ಯಾಸದ ಉದ್ದೇಶವು ಈ ಮುಂದಿನವುಗಳನ್ನು ಒಳಗೊಂಡಿರತಕ್ಕದ್ದು,–

(ಎ) ದಾರಿದ್ರ್ಯ ಅಥವಾ ದು:ಖ ಪರಿಹಾರ;

(ಬಿ) ಶಿಕ್ಷಣ;

(ಸಿ) ವೈದ್ಯಕೀಯ ಪರಿಹಾರ;

(ಡಿ) ಮನೋರಂಜನೆಗಾಗಿ ಅಥವಾ ಇತರ ವಿರಾಮ ಸಮಯ ಉದ್ಯೋಗಕ್ಕಾಗಿ ಸೌಲಭ್ಯಗಳನ್ನು ಒದಗಿಸುವುದನ್ನು (ಅಂಥ ಅವಕಾಶಗಳಿಗೆ ಸಹಾಯವನ್ನು ಒಳಗೊಂಡಂತೆ) ಆ ಸೌಲಭ್ಯಗಳನ್ನು ಸಮಾಜ ಕಲ್ಯಾಣ ಮತ್ತು ಸಾರ್ವಜನಿಕ ಪ್ರಯೋಜನದ ಹಿತಾಸಕ್ತಿಯಲ್ಲಿ ದೃಷ್ಟಿಯಲ್ಲಿ ಒದಗಿಸಿದ್ದಿರಬೇಕು; ಮತ್ತು

(ಇ) ಸಾಮಾನ್ಯ ಸಾರ್ವಜನಿಕರ ಉಪಯುಕ್ತತೆಯ ಯಾವುದೇ ಇತರ ಉದ್ದೇಶದ ಮುಂದುವರಿಕೆ, ಆದರೆ, ಅದರಲ್ಲಿ ಧಾರ್ಮಿಕ ಬೋಧನೆ ಅಥವಾ ಪೂಜೆಗಾಗಿ ಮಾತ್ರವೇ ಸಂಬಂಧಪಡುವ ಉದ್ದೇಶವು ಒಳಗೊಳ್ಳುವುದಿಲ್ಲ.

**ವಿವರಣೆ.**– ಈ ಪ್ರಕರಣದ ಉದ್ದೇಶಕ್ಕಾಗಿ, ಸಮಾಜ ಕಲ್ಯಾಣ ಮತ್ತು ಸಾರ್ವಜನಿಕ ಪ್ರಯೋಜನದ ಹಿತಾಸಕ್ತಿಯಲ್ಲಿ ಒದಗಿಸಲಾದ ಸೌಲಭ್ಯಗಳು, ಎಂದರೆ,–

(ಎ) ಮೂಲತ: ಯಾವ ವ್ಯಕ್ತಿಗಳಿಗಾಗಿ ಸೌಲಭ್ಯಗಳನ್ನು ನೀಡಲು ಉದ್ದೇಶಿಸಲಾಗಿದೆಯೋ ಆ ವ್ಯಕ್ತಿಗಳ ಜೀವನದ ಪರಿಸ್ಥಿತಿಯನ್ನು ಸುಧಾರಿಸುವ ಉದ್ದೇಶದೊಂದಿಗೆ ಒದಗಿಸಿರುವ ಸೌಲಭ್ಯಗಳು, ಮತ್ತು

(ಬಿ) (i) ಯಾವ ವ್ಯಕ್ತಿಗಳಿಗೆ ವಯಸ್ಸಿನ, ದೌರ್ಬಲ್ಯದ ಅಥವಾ ಅಸಮರ್ಥತೆಯ, ಬಡತನದ ಅಥವಾ ಸಾಮಾಜಿಕ ಹಾಗೂ ಆರ್ಥಿಕ ಪರಿಸ್ಥಿತಿಗಳ ಕಾರಣಕ್ಕಾಗಿ, ಮೇಲೆ ಹೇಳಿದಂಥ ಸೌಲಭ್ಯಗಳ ಅವಶ್ಯಕತೆಯಿರುವುದೋ ಆ ಸೌಲಭ್ಯಗಳು, ಅಥವಾ

(ii) ಬಹಳಷ್ಟು ಸಾರ್ವಜನಿಕರಿಗೆ ಯಾವ ಸೌಲಭ್ಯಗಳು ಲಭ್ಯವಾಗಬೇಕಾಗಿದೆಯೋ ಆ ಸೌಲಭ್ಯಗಳು.

(2) ಸದರಿ ಅಗತ್ಯತೆಗೆ ಒಳಪಟ್ಟು, ಈ ಪ್ರಕರಣದ (1)ನೇ ಉಪ ಪ್ರಕರಣವು, ವಿಶೇಷವಾಗಿ, ಗ್ರಾಮದ ಹಜಾರಗಳಲ್ಲಿಯ, ಸಮುದಾಯ ಕೇಂದ್ರಗಳಲ್ಲಿಯ ಮತ್ತು ಮಹಿಳಾ ಸಂಸ್ಥೆಗಳಲ್ಲಿಯ ಸೌಲಭ್ಯಗಳ ಏರ್ಪಾಟಿಗಾಗಿ, ಮತ್ತು ಮನೋರಂಜನೆಯ ಮತ್ತು ವಿರಾಮ ಸಮಯ ಉದ್ಯೋಗದ ಉದ್ದೇಶಗಳಿಗಾಗಿ, ಬಳಸಿಕೊಳ್ಳಬೇಕಾದ ಮೈದಾನಗಳು ಹಾಗೂ ಕಟ್ಟಡಗಳ ಏರ್ಪಾಡು ಮತ್ತು ನಿರ್ವಹಣೆಗೆ, ಮತ್ತು ಯಾವುದೇ ಅಂಥ ಚಟುವಟಿಕೆಗಳನ್ನು ವ್ಯವಸ್ಥೆಗೊಳಿಸುವ ಮೂಲಕ ಅಂಥ ಉದ್ದೇಶಗಳಿಗಾಗಿ ಸೌಲಭ್ಯ ವ್ಯವಸ್ಥೆಯನ್ನು ವಿಸ್ತರಿಸಲು ಅನ್ವಯವಾಗುವುದು.

**10. ಅನಿಶ್ಚಿತತೆಯ ಆಧಾರದ ಮೇಲೆ ಸಾರ್ವಜನಿಕ ನ್ಯಾಸವು ಅನೂರ್ಜಿತವಾಗುವುದಿಲ್ಲ.–** ಯಾವುದೇ ಕಾನೂನು, ರೂಢಿ ಅಥವಾ ಬಳಕೆಯಲ್ಲಿ ಏನೇ ಇದ್ದಾಗ್ಯೂ, ಒಂದು ಸಾರ್ವಜನಿಕ ನ್ಯಾಸವು, ಯಾವ ವ್ಯಕ್ತಿಗಳ ಪ್ರಯೋಜನಕ್ಕಾಗಿ ಅಥವಾ ಯಾವ ಉದ್ದೇಶಕ್ಕಾಗಿ ಸೃಜಿತವಾಗಿದೆಯೋ, ಆ ವ್ಯಕ್ತಿಗಳು ಅನಿಶ್ಚಿತರಾಗಿದ್ದಾರೆಂಬ ಕಾರಣದ ಮಾತ್ರದಿಂದಲೇ ಅನೂರ್ಜಿತವಾಗತಕ್ಕದ್ದಲ್ಲ.

**11. ಧರ್ಮಾದಾಯೇತರ ಉದ್ದೇಶಕ್ಕಾಗಿ ಅನೂರ್ಜಿತವಾಗಿದೆಯೆಂಬ ಆಧಾರದ ಮೇಲೆ ಸಾರ್ವಜನಿಕ ನ್ಯಾಸವು ಅನೂರ್ಜಿತವಾಗುವುದಿಲ್ಲ.–** ಕೆಲವು ಉದ್ದೇಶಗಳು ಸಾರ್ವಜನಿಕ ನ್ಯಾಸ ಉದ್ದೇಶಗಳಾಗಿದ್ದು ಹಾಗೂ ಕೆಲವು ಉದ್ದೇಶಗಳು ಧರ್ಮಾದಾಯೇತರ ಉದ್ದೇಶಗಳಿಗಾಗಿದ್ದ ಸಂದರ್ಭದಲ್ಲಿ, ಸೃಜಿಸಲಾದ ಸಾರ್ವಜನಿಕ ನ್ಯಾಸವು, ಆ ಕೆಲವು ಉದ್ದೇಶಗಳು ಧರ್ಮಾದಾಯೇತರ ಉದ್ದೇಶಕ್ಕೆ ಸಂಬಂಧಿಸಿದಂತೆ ಮಾತ್ರವೇ ಅನೂರ್ಜಿತವಾಗಿದೆ ಎಂಬ ಕಾರಣದಿಂದ ಸಾರ್ವಜನಿಕ ನ್ಯಾಸ ಉದ್ದೇಶಕ್ಕೆ ಸಂಬಂಧಿಸಿದಂತೆ ಅದು ಅನೂರ್ಜಿತವಾಗಿದೆ ಎಂದು ಭಾವಿಸತಕ್ಕದ್ದಲ್ಲ.

**12. ಹೊಣೆಗಾರಿಕೆ ಇಲ್ಲದಿರುವುದರ ಆಧಾರದ ಮೇಲೆ ಸಾರ್ವಜನಿಕ ನ್ಯಾಸವು ಅನೂರ್ಜಿತವಾಗುವುದಿಲ್ಲ.–** ಸಾರ್ವಜನಿಕ ನ್ಯಾಸ ಉದ್ದೇಶದ ಪ್ರಯೋಜನಕ್ಕಾಗಿ ಯಾವ ವ್ಯಕ್ತಿಯ ಹೆಸರಿನಲ್ಲಿ ಇದನ್ನು ಧಾರಣ ಮಾಡುವುದಕ್ಕೆ ಅಗತ್ಯಪಡಿಸಲಾಗಿದೆಯೋ ಆ ವ್ಯಕ್ತಿಯು ಅದರ ವಿಲೇವಾರಿ ಮಾಡುವುದಕ್ಕೆ ಯಾವುದೇ ಹೊಣೆಗಾರಿಕೆಯನ್ನು ಸೇರಿಸಿಲ್ಲವೆಂಬ ಕಾರಣದಿಂದ ಸಾರ್ವಜನಿಕ ನ್ಯಾಸ ಉದ್ದೇಶಕ್ಕಾಗಿ ಮಾಡಲಾದ ಯಾವುದೇ ಸ್ವತ್ತಿನ ವಿಲೇವಾರಿಯು, ಸಾರ್ವಜನಿಕ ನ್ಯಾಸವಾಗಿ ಅದನ್ನು ಅನೂರ್ಜಿತಗೊಳಿಸುತ್ತದೆಂದು ಭಾವಿಸತಕ್ಕದ್ದಲ್ಲ.

**13. ನಿರ್ದಿಷ್ಟ ಉದ್ದೇಶವು ವಿಫಲವಾಗುವುದರಿಂದ ಅಥವಾ ಸಂಘ, ಮುಂತಾದವುಗಳು ಅಸ್ತಿತ್ವದಲ್ಲಿರುವುದು ನಿಂತು ಹೋದಾಗ ಸಾರ್ವಜನಿಕ ನ್ಯಾಸವು ಅನೂರ್ಜಿತವಾಗುವುದಿಲ್ಲ.–** ಸಾರ್ವಜನಿಕ ನ್ಯಾಸ ಸ್ವರೂಪದ ನಿರ್ದಿಷ್ಟ ಉದ್ದೇಶಕ್ಕಾಗಿ ಅಥವಾ ಸಂಘದ ಪ್ರಯೋಜನಕ್ಕಾಗಿ ಅಥವಾ ಸಾರ್ವಜನಿಕ ನ್ಯಾಸ ಉದ್ದೇಶಕ್ಕಾಗಿ ರಚಿತವಾದ ಸಂಸ್ಥೆಗಾಗಿ ಯಾವುದೇ ಸಾರ್ವಜನಿಕ ನ್ಯಾಸವನ್ನು ಸೃಜಿಸಲಾಗಿದ್ದರೆ, ಅಂಥ ನ್ಯಾಸವು,–

(ಎ) ಯಾವ ನಿರ್ದಿಷ್ಟ ಉದ್ದೇಶದ ಪಾಲನೆಗಾಗಿ ನ್ಯಾಸವನ್ನು ಸೃಜಿಸಲಾಗಿತ್ತೋ ಆ ಉದ್ದೇಶದ ಪಾಲನೆಯು ಅಸಾಧ್ಯವಾಗಿದೆ ಅಥವಾ ಕಾರ್ಯಸಾಧ್ಯವಾಗಿಲ್ಲ; ಅಥವಾ

(ಬಿ) ಸಾಮಾನ್ಯ ಸಾರ್ವಜನಿಕ ನ್ಯಾಸ ಉದ್ದೇಶಕ್ಕಾಗಿ ನ್ಯಾಸದ ಸ್ವತ್ತನ್ನು ವಿನಿಯೋಗ ಮಾಡುವ ಉದ್ದೇಶವಿರಲಿಲ್ಲ ಎಂಬ ಸಂಗತಿ ಏನೇ ಇದ್ದರೂ, ಆ ಸಂಘ ಅಥವಾ ಸಂಸ್ಥೆಯು ಅಸ್ತಿತ್ವದಲ್ಲಿಲ್ಲ ಅಥವಾ ಅಸ್ತಿತ್ವದಲ್ಲಿರುವುದು ನಿಂತುಹೋಗಿದೆ;

– ಎಂಬ ಆಧಾರದ ಮೇಲೆ ಅನೂರ್ಜಿತವಾಗಿದೆ ಎಂದು ಭಾವಿಸತಕ್ಕದ್ದಲ್ಲ.

## ಅಧ್ಯಾಯ – IV

## ಸಾರ್ವಜನಿಕ ನ್ಯಾಸಗಳ ನೋಂದಣಿ

**14. ಸಾರ್ವಜನಿಕ ನ್ಯಾಸಗಳ ನೋಂದಣಿ ಕಚೇರಿಗಳು.–** ಪ್ರತಿಯೊಂದು ಪ್ರದೇಶದಲ್ಲಿ ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಂತೆ ಒಂದು ಸಾರ್ವಜನಿಕ ನ್ಯಾಸಗಳ ನೋಂದಣಿ ಕಚೇರಿ ಇರತಕ್ಕದ್ದು:

**15. ಉಪ ಸಾರ್ವಜನಿಕ ನ್ಯಾಸ ಆಯುಕ್ತರವರು ಸಾರ್ವಜನಿಕ ನ್ಯಾಸಗಳ ನೋಂದಣಿ ಕಚೇರಿಯ ಪ್ರಭಾರವನ್ನು ಹೊಂದಿರುವುದು.–** ರಾಜ್ಯ ಸರ್ಕಾರವು, ಉಪ ಸಾರ್ವಜನಿಕ ನ್ಯಾಸ ಆಯುಕ್ತರನ್ನು ಒಂದು ಅಥವಾ ಹೆಚ್ಚು ಸಾರ್ವಜನಿಕ ನ್ಯಾಸಗಳ ನೋಂದಣಿ ಕಚೇರಿಗಳ ಪ್ರಭಾರದಲ್ಲಿರುವಂತೆ ನೇಮಿಸಬಹುದು.

**16. ಪುಸ್ತಕಗಳು, ಸೂಚಿಗಳು ಮತ್ತು ರಿಜಿಸ್ಟರುಗಳು.–** ಪ್ರತಿಯೊಂದು ಸಾರ್ವಜನಿಕ ನ್ಯಾಸಗಳ ನೋಂದಣಿ ಕಚೇರಿಯಲ್ಲಿ ಅಥವಾ ಉಪ ಸಾರ್ವಜನಿಕ ನ್ಯಾಸಗಳ ನೋಂದಣಿ ಕಚೇರಿಯಲ್ಲಿ, ನಿಯಮಿಸಬಹುದಾದಂಥ ಪುಸ್ತಕಗಳು, ಸೂಚಿಗಳು ಮತ್ತು ಇತರ ರಿಜಿಸ್ಟರುಗಳನ್ನು ಪ್ರಭಾರದಲ್ಲಿರುವ ಉಪ ಸಾರ್ವಜನಿಕ ನ್ಯಾಸ ಆಯುಕ್ತರು ಇಡುವುದು ಮತ್ತು ನಿರ್ವಹಿಸುವುದು, ಅವಶ್ಯಕವಾಗಿರತಕ್ಕದ್ದು. ಅಂಥ ಪುಸ್ತಕಗಳು, ಸೂಚಿಗಳು ಮತ್ತು ರಿಜಿಸ್ಟರುಗಳು ನಿಯಮಿಸಬಹುದಾದಂಥ ವಿವರಗಳನ್ನು ಒಳಗೊಂಡಿರತಕ್ಕದ್ದು.

**17. ಸಾರ್ವಜನಿಕ ನ್ಯಾಸಗಳ ನೋಂದಣಿ.– (1)** ನ್ಯಾಸದ ಅಥವಾ ನ್ಯಾಸದ ಸ್ವತ್ತಿನ ಅಥವಾ ಸಂದರ್ಭಾನುಸಾರ ನ್ಯಾಸದ ಸ್ವತ್ತಿನ ಗಣನೀಯ ಭಾಗದ ನಿರ್ವಹಣೆಗಾಗಿ, ನ್ಯಾಸಧಾರಿಯು ಹೊಂದಿರುವ ಕಚೇರಿಯು ಯಾವ ಪ್ರದೇಶದ ಪರಿಮಿತಿಯೊಳಗೆ ಇರುವುದೋ ಪ್ರದೇಶದ ಉಪ ಸಹಾಯಕ ಸಾರ್ವಜನಿಕ ನ್ಯಾಸ ಆಯುಕ್ತರಿಗೆ, ನಿಯಮಿಸಬಹುದಾದಂಥ ನಮೂನೆಯಲ್ಲಿ ಮತ್ತು ಅಂಥ ಫೀಜಿನ ಜೊತೆಯಲ್ಲಿ ಲಿಖಿತದಲ್ಲಿ ಅರ್ಜಿಯನ್ನು ಸಾರ್ವಜನಿಕ ನ್ಯಾಸದ ನೋಂದಣಿಗಾಗಿ, ಸಲ್ಲಿಸುವುದು ಸಾರ್ವಜನಿಕ ನ್ಯಾಸದ ನ್ಯಾಸಧಾರಿಯ ಕರ್ತವ್ಯವಾಗಿರತಕ್ಕದ್ದು.

(2) ಅಂಥ ಅರ್ಜಿಯನ್ನು,–

(ಎ) ಸಾರ್ವಜನಿಕ ನ್ಯಾಸವನ್ನು, ಈ ಅಧಿನಿಯಮವು ಅದಕ್ಕೆ ಅನ್ವಯವಾಗುವುದಕ್ಕೆ ಮೊದಲೇ ಸೃಜಿಸಿದ್ದ ಸಂದರ್ಭದಲ್ಲಿ, ಈ ಅಧಿನಿಯಮವು ಅನ್ವಯವಾಗುವ ದಿನಾಂಕದಿಂದ ಆರು ತಿಂಗಳೊಳಗೆ; ಮತ್ತು

(ಬಿ) ಈ ಅಧಿನಿಯಮವು ಜಾರಿಗೆ ಬಂದ ತರುವಾಯ ಸಾರ್ವಜನಿಕ ನ್ಯಾಸವನ್ನು ಸೃಜಿಸಿದ್ದ ಸಂದರ್ಭದಲ್ಲಿ, ಅದರ ಸೃಜನೆಯ ಆರು ತಿಂಗಳೊಳಗೆ,

– ಸಲ್ಲಿಸತಕ್ಕದ್ದು.

(3) ಅಂಥ ಅರ್ಜಿಯು, ಇತರ ವಿಷಯಗಳ ಜೊತೆಗೆ ಈ ಮುಂದಿನ ವಿವರಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಸಾರ್ವಜನಿಕ ನ್ಯಾಸವನ್ನು ಯಾವ ಹೆಸರಿನಿಂದ ಕರೆಯಲಾಗುತ್ತಿದೆಯೋ ಅಥವಾ ಕರೆಯಬೇಕಾಗಿದೆಯೋ ಆ ಹೆಸರು (ಇದರಲ್ಲಿ ಇನ್ನು ಮುಂದೆ ಸಾರ್ವಜನಿಕ ನ್ಯಾಸದ ಹೆಸರು ಎಂದು ಉಲ್ಲೇಖಿಸಲಾಗಿದೆ);

(ii) ನ್ಯಾಸಧಾರಿಗಳ ಮತ್ತು ವ್ಯವಸ್ಥಾಪಕನ ಹೆಸರು ಮತ್ತು ವಿಳಾಸ;

(iii) ನ್ಯಾಸಧಾರಿಯ ಪದಕ್ಕೆ ಉತ್ತರಾಧಿಕಾರದ ವಿಧಾನ;

(iv) ನ್ಯಾಸದ ಚರ ಮತ್ತು ಸ್ಥಿರ ಸ್ವತ್ತುಗಳ ಪಟ್ಟಿ ಮತ್ತು ಅವುಗಳನ್ನು ಗುರುತಿಸಲು ಸಾಕಾಗಬಹುದಾದಂಥ ವಿವರಣೆಗಳು ಮತ್ತು ವಿವರಗಳು;

(v) ಚರ ಮತ್ತು ಸ್ಥಿರ ಸ್ವತ್ತುಗಳ ಅಂದಾಜು ಮೌಲ್ಯ;

(vi) ಅರ್ಜಿಯನ್ನು ಸಲ್ಲಿಸಿದ ದಿನಾಂಕದ ನಿಕಟ ಪೂರ್ವದ ಮೂರು ವರ್ಷಗಳ ಅವಧಿ ಅಥವಾ ನ್ಯಾಸವು ರಚಿತವಾದಾಗಿನಿಂದ ಕಳೆದಿರುವ ಅವಧಿ, ಇವುಗಳಲ್ಲಿ ಯಾವುದು ಕಡಿಮೆಯೋ ಆ ಅವಧಿಯ ಆದಾಯದ ಮೇಲೆ ಅಂದಾಜು ಮಾಡಲಾದ ನ್ಯಾಸದ ಸ್ವತ್ತಿನ ಒಟ್ಟು ಸರಾಸರಿ ವಾರ್ಷಿಕ ಆದಾಯ;

(vii) (vi) ನೇ ಖಂಡದ ಅಡಿಯಲ್ಲಿ ಇರುವ ವಿವರಗಳಿಗೆ ಸಂಬಂಧಪಡುವ ಅವಧಿಯೊಳಗೆ ವಹಿಸಿದ ಖರ್ಚಿನ ಮೇಲೆ ಅಂದಾಜು ಮಾಡಲಾದ ಅಂಥ ಸಾರ್ವಜನಿಕ ನ್ಯಾಸದ ಸಂಬಂಧದಲ್ಲಿ ಸರಾಸರಿ ವಾರ್ಷಿಕ ವೆಚ್ಚದ ಮೊಬಲಗು;

(viii) ಸಾರ್ವಜನಿಕ ನ್ಯಾಸಕ್ಕೆ ಸಂಬಂಧಪಟ್ಟಂತೆ ನ್ಯಾಸಧಾರಿ ಅಥವಾ ವ್ಯವಸ್ಥಾಪಕನೊಡನೆ ಪತ್ರ ವ್ಯವಹಾರ ಮಾಡಬಹುದಾದ ವಿಳಾಸ;

(ix) ನಿಯಮಿಸಬಹುದಾದ ಅಂಥ ಇತರ ವಿವರಗಳು:

ಪರಂತು, ಯಾವುದೇ ಅಥವಾ ಎಲ್ಲ ಸಾರ್ವಜನಿಕ ನ್ಯಾಸಗಳ ಸಂದರ್ಭದಲ್ಲಿ, ನಿಯಮಗಳಲ್ಲಿ ನಿರ್ದಿಷ್ಟ ಪಡಿಸಬಹುದಾದಂಥ ಮೌಲ್ಯದ ಮತ್ತು ಅಂಥ ವಿಧದ ನ್ಯಾಸದ ಸ್ವತ್ತಿನ ವಿವರಗಳನ್ನು ನೀಡುವುದು ಅವಶ್ಯವಾಗಿರತಕ್ಕದ್ದಲ್ಲವೆಂದು ನಿಯಮಗಳಲ್ಲಿ ಉಪಬಂಧಿಸಬಹುದು.

(4) (1)ನೇ ಉಪ ಪ್ರಕರಣದ ಅಡಿಯಲ್ಲಿ ಸಲ್ಲಿಸಲಾದ ಪ್ರತಿಯೊಂದು ಅರ್ಜಿಗೆ ನ್ಯಾಸಧಾರಿಯು ಅಥವಾ ಈ ಸಂಬಂಧದಲ್ಲಿ ಆತನು ವಿಶೇಷವಾಗಿ ಅಧಿಕೃತಗೊಳಿಸಿದ ಆತನ ಏಜೆಂಟನು, ನಿಯಮಿಸಲಾದ ರೀತಿಯಲ್ಲಿ ಸಹಿ ಮಾಡತಕ್ಕದ್ದು ಮತ್ತು ಅದನ್ನು ಸತ್ಯಾಪಿಸತಕ್ಕದ್ದು. ನ್ಯಾಸ ಪತ್ರವನ್ನು ಬರೆದು ಕೊಡಲಾಗಿದ್ದರೆ ಮತ್ತು ಅದು ಚಾಲ್ತಿಯಲ್ಲಿದ್ದರೆ ಆ ನ್ಯಾಸ ಪತ್ರದ ಒಂದು ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

(5) ಅಂಥ ಅರ್ಜಿಯನ್ನು ಸ್ವೀಕರಿಸಿದ ಮೇಲೆ, ಉಪ ಸಾರ್ವಜನಿಕ ನ್ಯಾಸದ ಆಯುಕ್ತರು, ಆ ಅರ್ಜಿಯು ಯಾವುದೇ ವಿವರಗಳಲ್ಲಿ ಅಪೂರ್ಣವಾಗಿದೆ ಎಂದು ಅಥವಾ ಸಾರ್ವಜನಿಕ ನ್ಯಾಸದ ಪೂರ್ಣ ವಿವರಗಳನ್ನು ಬಹಿರಂಗ ಪಡಿಸಲಾಗಿಲ್ಲವೆಂಬ ಕಾರಣಗಳ ಮೇಲೆ ಆ ಅರ್ಜಿಯನ್ನು ನ್ಯಾಸಧಾರಿಗೆ ಹಿಂದಿರುಗಿಸಬಹುದು ಮತ್ತು ಅರ್ಜಿಯಲ್ಲಿ ಎಲ್ಲ ಪೂರ್ಣ ವಿವರಗಳನ್ನು ನೀಡಬೇಕೆಂದು ಅಥವಾ ನ್ಯಾಸದ ಪೂರ್ಣ ವಿವರಗಳನ್ನು ಅದರಲ್ಲಿ ಬಹಿರಂಗ ಪಡಿಸಬೇಕೆಂದು ಮತ್ತು ಅಂಥ ನಿರ್ದೇಶನದಲ್ಲಿ ನಿರ್ದಿಷ್ಟಪಡಿಸದ ಅವಧಿಯೊಳಗಾಗಿ ಅದನ್ನು ಮತ್ತೆ ಸಲ್ಲಿಸಬೇಕೆಂದು ನಿರ್ದೇಶಿಸಬಹುದು ಮತ್ತು ಆ ನಿರ್ದೇಶನಗಳನ್ನು ಪಾಲಿಸುವುದು ನ್ಯಾಸಧಾರಿಯ ಕರ್ತವ್ಯವಾಗಿರತಕ್ಕದ್ದು.

(6) ಅಂಥ ಸಾರ್ವಜನಿಕ ನ್ಯಾಸದ ಸ್ಥಿರ ಸ್ವತ್ತಿನ ಸಂಬಂಧದಲ್ಲಿ ಅಂಥ ಸ್ಥಿರ ಸ್ವತ್ತು ಇರುವ ಪ್ರದೇಶದ ಉಪ ನೋಂದಣಾಧಿಕಾರಿಗೆ, ಆ ಸ್ವತ್ತಿನ ನೋಂದಣಿಯ ಉದ್ದೇಶಕ್ಕಾಗಿ ಸಾರ್ವಜನಿಕ ನ್ಯಾಸದ ಹೆಸರು ಮತ್ತು ವಿವರಣೆಯನ್ನು ಒಳಗೊಂಡ ವಿವರಗಳು ಇರುವ ನಿಯಮಿತ ನಮೂನೆಯಲ್ಲಿನ ಜ್ಞಾಪನ ಪತ್ರವನ್ನು ಉಪ ನೋಂದಣಾಧಿಕಾರಿಗೆ ಕಳುಹಿಸುವುದು ಸಾರ್ವಜನಿಕ ನ್ಯಾಸದ ನ್ಯಾಸದಾರಿಯ ಕರ್ತವ್ಯವಾಗಿರತಕ್ಕದ್ದು. ಅಂಥ ಜ್ಞಾಪನ ಪತ್ರವನ್ನು ಆ ನ್ಯಾಸವನ್ನು ಸೃಜಿಸಿದ ದಿನಾಂಕದಿಂದ ಮೂರು ತಿಂಗಳೊಳಗಾಗಿ ಕಳುಹಿಸತಕ್ಕದ್ದು ಮತ್ತು ಅದಕ್ಕೆ ನ್ಯಾಸಧಾರಿಯು ಅಥವಾ ಈ ಸಂಬಂಧದಲ್ಲಿ ಆತನು ವಿಶೇಷವಾಗಿ ಅಧಿಕೃತಗೊಳಿಸಿದ ಆತನ ಏಜೆಂಟನು ನಿಯಮಿಸಲಾದ ರೀತಿಯಲ್ಲಿ ಸಹಿ ಮಾಡತಕ್ಕದ್ದು ಮತ್ತು ಅದನ್ನು ಸತ್ಯಾಪನೆ ಮಾಡತಕ್ಕದ್ದು.

**18. ನೋಂದಣಿಗಾಗಿ ವಿಚಾರಣೆ.**– 17ನೇ ಪ್ರಕರಣದಡಿಯಲ್ಲಿ ಒಂದು ಅರ್ಜಿಯನ್ನು ಸ್ವೀಕರಿಸಿದ ಮೇಲೆ ಅಥವಾ ಸಾರ್ವಜನಿಕ ನ್ಯಾಸದಲ್ಲಿ ಹಿತಾಸಕ್ತಿಯನ್ನು ಹೊಂದಿರುವ ಯಾವೊಬ್ಬ ವ್ಯಕ್ತಿಯು ಅಥವಾ ಸ್ವಪ್ರೇರಣೆಯಿಂದ ಸಲ್ಲಿಸಿದ ಅರ್ಜಿಯ ಮೇಲೆ, ಉಪ ಸಾರ್ವಜನಿಕ ನ್ಯಾಸ ಆಯುಕ್ತರು,–

(i) ನ್ಯಾಸವು ಅಸ್ತಿತ್ವದಲ್ಲಿದೆಯೇ ಮತ್ತು ಅಂಥ ನ್ಯಾಸವು ಸಾರ್ವಜನಿಕ ನ್ಯಾಸವಾಗಿದೆಯೇ ಎಂಬುದನ್ನು;

(ii) ಯಾವುದೇ ಸ್ವತ್ತು ಅಂಥ ನ್ಯಾಸದ ಸ್ವತ್ತಾಗಿದೆಯೇ ಎಂಬುದನ್ನು;

(iii) ನ್ಯಾಸದ ವಸ್ತು ವಿಷಯದ ಪೂರ್ಣ ಅಥವಾ ಯಾವುದೇ ಗಣನೀಯ ಭಾಗವು ಅಧಿಕಾರ ವ್ಯಾಪ್ತಿಯೊಳಗೆ ಇದೆಯೇ ಎಂಬುದನ್ನು;

(iv) ಅಂಥ ನ್ಯಾಸದ ನ್ಯಾಸಧಾರಿಗಳ ಹಾಗೂ ವ್ಯವಸ್ಥಾಪಕರ ಹೆಸರುಗಳು ಮತ್ತು ವಿಳಾಸಗಳು;

(v) ಅಂಥ ನ್ಯಾಸದ ನ್ಯಾಸಧಾರಿಗಳ ಪದಕ್ಕೆ ಉತ್ತರಾಧಿಕಾರದ ವಿಧಾನ;

(vi) ಅಂಥ ನ್ಯಾಸದ ಉಗಮ, ಸ್ವರೂಪ ಮತ್ತು ಉದ್ದೇಶ;

(vii) ಅಂಥ ನ್ಯಾಸದ ಸರಾಸರಿ ನಿವ್ವಳ ವಾರ್ಷಿಕ ಆದಾಯ ಮತ್ತು ವೆಚ್ಚ ಮೊತ್ತ; ಮತ್ತು

(viii) ನಿಯಮಿಸಬಹುದಾದ ಯಾವುದೇ ಇತರ ವಿವರಗಳು;

– ತಿಳಿದುಕೊಳ್ಳುವ ಉದ್ದೇಶಕ್ಕಾಗಿ ನಿಯಮಿಸಲಾದ ವಿಧಾನದಲ್ಲಿ ವಿಚಾರಣೆಯನ್ನು ನಡೆಸತಕ್ಕದ್ದು.

**19. ಉಪ ಸಾರ್ವಜನಿಕ ನ್ಯಾಸ ಆಯುಕ್ತರ ನಿರ್ಣಯಗಳು.–** 18ನೇ ಪ್ರಕರಣದ ಅಡಿಯಲ್ಲಿನ, ವಿಚಾರಣೆಯು ಮುಕ್ತಾಯವಾದಾದ ಮೇಲೆ, ಉಪ ಸಾರ್ವಜನಿಕ ನ್ಯಾಸ ಆಯುಕ್ತರು, ತಮ್ಮ ನಿರ್ಣಯಗಳನ್ನು ಅದರ ಕಾರಣಗಳೊಂದಿಗೆ ದಾಖಲಿಸತಕ್ಕದ್ದು ಮತ್ತು ನೋಂದಣಿ ಶುಲ್ಕದ ಸಂದಾಯಕ್ಕಾಗಿ ಒಂದು ಆದೇಶವನ್ನು ಮಾಡಬಹುದು.

**20. ರಿಜಿಸ್ಟರ್‌ನಲ್ಲಿ ನಮೂದುಗಳು.–** (1) ಉಪ ಸಾರ್ವಜನಿಕ ನ್ಯಾಸ ಆಯುಕ್ತರು, 19ನೇ ಪ್ರಕರಣದ ಅಡಿಯಲ್ಲಿ ಆತನು ದಾಖಲಿಸಿದ ನಿರ್ಣಯಗಳಿಗನುಸಾರವಾಗಿ ಅಥವಾ ಅಪೀಲನ್ನು ಸಲ್ಲಿಸಿದ್ದಲ್ಲಿ, ಸಕ್ಷಮ ಪ್ರಾಧಿಕಾರದ ಅಂತಿಮ ತೀರ್ಮಾನಕ್ಕೆ ಅನುಸಾರವಾಗಿ, 16ನೇ ಪ್ರಕರಣದಡಿಯಲ್ಲಿ ಇಡಲಾದ ರಿಜಿಸ್ಟರಿನಲ್ಲಿ ನಮೂದುಗಳನ್ನು ಮಾಡತಕ್ಕದ್ದು.

(2) ಹಾಗೆ ಮಾಡಲಾದ ನಮೂದುಗಳು, ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು ಮತ್ತು 21, 22, 23 ಮತ್ತು 24ನೇ ಪ್ರಕರಣಗಳ ಉಪಬಂಧಗಳ ಅಡಿಯಲ್ಲಿ ದಾಖಲಿಸಲಾದ ಯಾವುದೇ ಬದಲಾವಣೆಗೆ ಒಳಪಟ್ಟು, ಅಂತಿಮ ಮತ್ತು ನಿರ್ಣಾಯಕವಾಗಿರತಕ್ಕದ್ದು.

**21. ಬದಲಾವಣೆ.–** (1) 16ನೇ ಪ್ರಕರಣದಡಿಯಲ್ಲಿ ಇಡಲಾದ ರಿಜಿಸ್ಟರಿನಲ್ಲಿ ದಾಖಲಿಸಲಾದ ಯಾವುವೇ ನಮೂದುಗಳಲ್ಲಿ, ಯಾವುದೇ ಬದಲಾವಣೆಯು ಕಂಡುಬಂದಲ್ಲಿ, ನ್ಯಾಸಧಾರಿಯು, ಅಂಥ ಬದಲಾವಣೆಯು ಕಂಡುಬಂದ ದಿನಾಂಕದಿಂದ ತೊಂಬತ್ತು ದಿನಗಳೊಳಗೆ ಅಥವಾ ಅಂಥ ಸಾರ್ವಜನಿಕ ನ್ಯಾಸದ ಆಡಳಿತದ ಹಿತಾಸಕ್ತಿಯಲ್ಲಿ ಅಂಥ ನಮೂದುಗಳಲ್ಲಿ ಯಾವುದೇ ಬದಲಾವಣೆಯು ಅಪೇಕ್ಷಣೀಯವಾಗಿದ್ದಲ್ಲಿ, ನಿಯಮಿಸಬಹುದಾದ ಅಂಥ ನಮೂನೆಯಲ್ಲಿ ರಿಜಿಸ್ಟ್ರರ್ ಅನ್ನು ಇಟ್ಟಿರುವ ಸಾರ್ವಜನಿಕ ನ್ಯಾಸಗಳ ನೋಂದಣಿ ಕಛೇರಿಯ ಪ್ರಭಾರದಲ್ಲಿರುವ ಉಪ ಸಾರ್ವಜನಿಕ ನ್ಯಾಸ ಆಯುಕ್ತರಿಗೆ, ಅಂಥ ಬದಲಾವಣೆ ಅಥವಾ ಪ್ರಸ್ತಾವಿತ ಬದಲಾವಣೆಯನ್ನು ವರದಿ ಮಾಡತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ವರದಿ ಮಾಡಬೇಕಾದ ಬದಲಾವಣೆಯು, ಯಾವುದೇ ಸ್ಥಿರ ಸ್ವತ್ತಿಗೆ ಸಂಬಂಧಿಸಿದ್ದಲ್ಲಿ, ನ್ಯಾಸಧಾರಿಯು, ವರದಿಯೊಂದಿಗೆ, ಅಂಥ ಸಾರ್ವಜನಿಕ ನ್ಯಾಸದ ಸ್ಥಿರ ಸ್ವತ್ತಿನಲ್ಲಿ ಯಾವುದೇ ಬದಲಾವಣೆಗೆ ಸಂಬಂಧಿಸಿದಂತೆ ವಿವರವನ್ನು ಹೊಂದಿರುವ (ಸಾರ್ವಜನಿಕ ನ್ಯಾಸದ ಹೆಸರು ಮತ್ತು ವಿವರಣೆಯನ್ನು ಒಳಗೊಂಡಂತೆ) ನಿಯಮಿಸಲಾದ ನಮೂನೆಯಲ್ಲಿ ಒಂದು ಜ್ಞಾಪನಾಪತ್ರವನ್ನು, ನೋಂದಣಿಯ ಉದ್ದೇಶಕ್ಕಾಗಿ ಉಪನೋಂದಣಾಧಿಕಾರಿಯವರಿಗೆ ಕಳುಹಿಸಿಕೊಡುವುದಕ್ಕಾಗಿ ಒದಗಿಸತಕ್ಕದ್ದು. ಅಂಥ ಜ್ಞಾಪನಾಪತ್ರವನ್ನು, ನಿಯಮಿಸಲಾದ ವಿಧಾನದಲ್ಲಿ ನ್ಯಾಸಧಾರಿ ಅಥವಾ ಈ ಸಂಬಂಧದಲ್ಲಿ ಆತನು ವಿಶೇಷವಾಗಿ ಅಧಿಕೃತಗೊಳಿಸಿದ ಏಜೆಂಟನು ಸಹಿ ಮಾಡತಕ್ಕದ್ದು ಮತ್ತು ಸತ್ಯಾಪನೆ ಮಾಡತಕ್ಕದ್ದು.

(3) 16ನೇ ಪ್ರಕರಣದಡಿಯಲ್ಲಿ ಇಡಲಾದ ರಿಜಿಸ್ಟರಿನಲ್ಲಿನ ನಮೂದುಗಳ ಸರಿತನವನ್ನು ಸತ್ಯಾಪನೆ ಮಾಡುವ ಅಥವಾ ರಿಜಿಸ್ಟರಿನಲ್ಲಿ ದಾಖಲಿಸಲಾದ ಯಾವುದೇ ವಿವರಗಳಲ್ಲಿ ಯಾವುದೇ ಬದಲಾವಣೆಯು ಆಗಿದೆ ಎಂದು ಖಚಿತಪಡಿಸಿಕೊಳ್ಳುವ ಉದ್ದೇಶಕ್ಕಾಗಿ, ಉಪ ಸಾರ್ವಜನಿಕ ನ್ಯಾಸ ಆಯುಕ್ತರವರು, ನಿಯಮಿಸಲಾದ ವಿಧಾನದಲ್ಲಿ ಒಂದು ವಿಚಾರಣೆಯನ್ನು ನಡೆಸಬಹುದು.

(4) ಉಪ ಸಾರ್ವಜನಿಕ ನ್ಯಾಸ ಆಯುಕ್ತರು, (1)ನೇ ಉಪಪ್ರಕರಣದ ಅಡಿಯಲ್ಲಿ ವರದಿಯನ್ನು ಸ್ವೀಕರಿಸಿದ ಮತ್ತು ಅವಶ್ಯವಾದಲ್ಲಿ (3)ನೇ ಉಪಪ್ರಕರಣದ ಅಡಿಯಲ್ಲಿ ವಿಚಾರಣೆಯನ್ನು ನಡೆಸಿದ ತರುವಾಯ ಅಥವಾ (3)ನೇ ಉಪಪ್ರಕರಣದ ಅಡಿಯಲ್ಲಿ ವಿಚಾರಣೆಯನ್ನು ನಡೆಸಿದ ತರುವಾಯವೇ, 16ನೇ ಪ್ರಕರಣದಡಿಯಲ್ಲಿ ಇಡಲಾದ ರಿಜಿಸ್ಟರಿನಲ್ಲಿ, ನಿರ್ದಿಷ್ಟ ಸಾರ್ವಜನಿಕ ನ್ಯಾಸದ ಸಂಬಂಧದಲ್ಲಿ ದಾಖಲು ಮಾಡಿದ ಯಾವುವೇ ನಮೂದುಗಳಲ್ಲಿ ಬದಲಾವಣೆಯಾಗಿದೆಯೆಂದು ಅಥವಾ ಆ ನ್ಯಾಸದ ಆಡಳಿತ ಕಚೇರಿ ಹಾಗೂ ಪೂರ್ಣ ನ್ಯಾಸದ ಸ್ವತ್ತು ರಾಜ್ಯದಲ್ಲಿ ಇರುವುದು ನಿಂತುಹೋಗುವ ಎರಡರಲ್ಲೂ ಪರಿಣಾಮ ಹೊಂದಿರುವ ಬದಲಾವಣೆಯ ಕಾರಣದಿಂದಾಗಿ ರಿಜಿಸ್ಟರಿನಿಂದ ನ್ಯಾಸವನ್ನು ತೆಗೆದುಹಾಕಬೇಕೆಂದು ಮನದಟ್ಟಾದರೆ, ಆತನು, ಅಷ್ಟರಮಟ್ಟಿಗೆ ಕಾರಣಗಳೊಂದಿಗೆ ನಿರ್ಣಯವನ್ನು ದಾಖಲಿಸತಕ್ಕದ್ದು; ಮತ್ತು ಆತನಿಗೆ ಹಾಗೆ ಮನದಟ್ಟಾಗದಿದ್ದಲ್ಲಿ ಅದಕ್ಕನುಸಾರವಾಗಿ ಅದರ ಕಾರಣಗಳೊಂದಿಗೆ ತನ್ನ ನಿರ್ಣಯವನ್ನು ದಾಖಲು ಮಾಡತಕ್ಕದ್ದು. ಯಾವುದೇ ಅಂಥ ನಿರ್ಣಯದ ಸಂಬಂಧದಲ್ಲಿ ಸಾರ್ವಜನಿಕ ನ್ಯಾಸ ಆಯೋಗಕ್ಕೆ ಅಪೀಲು ಸಲ್ಲಿಸ ಬಹುದಾದಂಥದ್ದು ಆಗಿರತಕ್ಕದ್ದು:

ಪರಂತು, ಉಪ ಸಾರ್ವಜನಿಕ ನ್ಯಾಸ ಆಯುಕ್ತರು, ಈ ಅಧಿನಿಯಮದಲ್ಲಿ ಉಪಬಂಧ ಕಲ್ಪಿಸಿದಂತೆ, ಅಪೀಲು ವಿಚಾರಣಾ ಪ್ರಾಧಿಕಾರದ ತೀರ್ಮಾನಕ್ಕನುಸಾರವಾಗಿ ಸದರಿ ರಿಜಿಸ್ಟ್ರರಿನಲ್ಲಿಯ ನಮೂದುಗಳನ್ನು ತಿದ್ದುಪಡಿ ಮಾಡತಕ್ಕದ್ದು ಅಥವಾ ತೆಗೆದುಹಾಕತಕ್ಕದ್ದು.

(5) (4)ನೇ ಉಪಪ್ರಕರಣದಡಿಯಲ್ಲಿ, ನಮೂದನ್ನು ತಿದ್ದುಪಡಿ ಮಾಡಿದ್ದಲ್ಲಿ ಅಥವಾ ರಿಜಿಸ್ಟರಿನಿಂದ ನ್ಯಾಸವನ್ನು ತೆಗೆದುಹಾಕಿದ್ದಲ್ಲಿ, ಉಪ ಸಾರ್ವಜನಿಕ ನ್ಯಾಸ ಆಯುಕ್ತರು, (2)ನೇ ಉಪಪ್ರಕರಣದ ಅಡಿಯಲ್ಲಿ ತಮಗೆ ಒದಗಿಸಲಾದ ಜ್ಞಾಪನವನ್ನು, ತಿದ್ದುಪಡಿಯಾದ ನಮೂದನ್ನು ಅಥವಾ ರಿಜಿಸ್ಟರಿನಿಂದ ನ್ಯಾಸವನ್ನು ತೆಗೆದುಹಾಕಿದ್ದನ್ನು ಪ್ರಮಾಣೀಕರಿಸಿದ ತರುವಾಯ, ನೋಂದಣಿಯ ಉದ್ದೇಶಕ್ಕಾಗಿ, ಉಪ ನೋಂದಣಾಧಿಕಾರಿಯವರಿಗೆ ಸಲ್ಲಿಸತಕ್ಕದ್ದು.

**22. ಉಪ ಸಾರ್ವಜನಿಕ ನ್ಯಾಸ ಆಯುಕ್ತರಿಂದ ಮತ್ತಷ್ಟು ವಿಚಾರಣೆ.–** 20,21 ಅಥವಾ 23ನೇ ಪ್ರಕರಣದ ಅಡಿಯಲ್ಲಿ ರಿಜಿಸ್ಟರಿನಲ್ಲಿ ನಮೂದುಗಳನ್ನು ಮಾಡಿದ ತರುವಾಯ, 18ನೇ ಪ್ರಕರಣ, ಅಥವಾ 21ನೇ ಪ್ರಕರಣದ (4)ನೇ ಉಪಪ್ರಕರಣದ ಅಥವಾ ಸಂದರ್ಭಾನುಸಾರ 27ನೇ ಪ್ರಕರಣದಡಿಯಲ್ಲಿ ವಿಚಾರಣೆಯ ವಸ್ತು ವಿಷಯವಲ್ಲದ, ಯಾವುದೇ ಸಾರ್ವಜನಿಕ ನ್ಯಾಸಕ್ಕೆ ಸಂಬಂಧಿಸಿದ ಯಾವುದೇ ವಿವರವು, ವಿಚಾರಣೆಯಾಗದೇ ಉಳಿದಿದೆಯೆಂದು ಯಾವುದೇ ಸಮಯದಲ್ಲಿ, ಉಪ ಸಾರ್ವಜನಿಕ ನ್ಯಾಸ ಆಯುಕ್ತರಿಗೆ ಕಂಡುಬಂದಲ್ಲಿ, ಉಪ ಸಾರ್ವಜನಿಕ ನ್ಯಾಸ ಆಯುಕ್ತರು, ನಿಯಮಿಸಲಾದ ವಿಧಾನದಲ್ಲಿ ಮತ್ತಷ್ಟು ವಿಚಾರಣೆಯನ್ನು ಮಾಡಬಹುದು, ಆದ ತೀರ್ಮಾನಕ್ಕನುಸಾರವಾಗಿ ಅಥವಾ ಈ ಅಧಿನಿಯಮದ ಮೂಲಕ

ಉಪಬಂಧಿಸಲಾದಂತೆ ಅಪೀಲುಗಳನ್ನು ಅಥವಾ ಅರ್ಜಿಗಳನ್ನು ಸಲ್ಲಿಸಿದ್ದಲ್ಲಿ, ಸಕ್ಷಮ ಪ್ರಾಧಿಕಾರದ ತೀರ್ಮಾನಕ್ಕನುಸಾರವಾಗಿ, ರಿಜಿಸ್ಟರಿನಲ್ಲಿ ತನ್ನ ನಿರ್ಣಯಗಳನ್ನು ದಾಖಲಿಸಿ ನಮೂದುಗಳನ್ನು ಮಾಡತಕ್ಕದ್ದು. 18, 19, 20 ಮತ್ತು 21ನೇ ಪ್ರಕರಣಗಳ ಉಪಬಂಧಗಳು ಆದಷ್ಟು ಮಟ್ಟಿಗೆ, ವಿಚಾರಣೆಗೆ, ತೀರ್ಮಾನಗಳನ್ನು ದಾಖಲು ಮಾಡುವುದಕ್ಕೆ ಮತ್ತು ಈ ಪ್ರಕರಣದ ಅಡಿಯಲ್ಲಿ ರಿಜಿಸ್ಟರಿನಲ್ಲಿ ನಮೂದುಗಳನ್ನು ಮಾಡುವುದಕ್ಕೆ ಅನ್ವಯವಾಗತಕ್ಕದ್ದು.

**23. ಈಗಾಗಲೇ ನೋಂದಣಿಯಾದ ಸಾರ್ವಜನಿಕ ನ್ಯಾಸದ ಹೆಸರಿನಲ್ಲಿ ನ್ಯಾಸದ ಸ್ವತ್ತಿನ ನೋಂದಣಿ, ಇತ್ಯಾದಿ.–** (1) ಈ ಅಧಿನಿಯಮದ 27ನೇ ಪ್ರಕರಣದಡಿಯಲ್ಲಿ ನೋಂದಣಿಯಾಗಿದೆಯೆಂದು ಭಾವಿಸಲಾಗುವ ಸಾರ್ವಜನಿಕ ನ್ಯಾಸದ ಸಂದರ್ಭದಲ್ಲಿ ಅಥವಾ ಸಾರ್ವಜನಿಕ ನ್ಯಾಸದ ನ್ಯಾಸಧಾರಿಯು, ಈ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಆರು ತಿಂಗಳುಗಳೊಳಗೆ, ಅಂಥ ಸಾರ್ವಜನಿಕ ನ್ಯಾಸದ ಹೆಸರಿನಲ್ಲಿ ಸಾರ್ವಜನಿಕ ನ್ಯಾಸದ ಸ್ವತ್ತಿನ ನೋಂದಣಿಗಾಗಿ ಲಿಖಿತ ಅರ್ಜಿಯನ್ನು ಸಲ್ಲಿಸತಕ್ಕದ್ದು.

(2) ಅಂಥ ಅರ್ಜಿಗೆ, ನ್ಯಾಸಧಾರಿ ಅಥವಾ ಈ ಸಂಬಂಧದಲ್ಲಿ ಆತನಿಂದ ವಿಶೇಷವಾಗಿ ಪ್ರಾಧಿಕೃತನಾದ ಆತನ ಏಜೆಂಟನು ಸಹಿ ಮಾಡತಕ್ಕದ್ದು ಮತ್ತು ಸತ್ಯಾಪನೆ ಮಾಡತಕ್ಕದ್ದು ಮತ್ತು 16ನೇ ಪ್ರಕರಣದಡಿಯಲ್ಲಿ ಇಡಲಾದ ರಿಜಿಸ್ಟರಿನಲ್ಲಿ ಅಂಥ ಸಾರ್ವಜನಿಕ ನ್ಯಾಸದ ಸಂಬಂಧದಲ್ಲಿ ನಮೂದುಗಳನ್ನು ಮಾಡಿದ ಉಪ ಸಾರ್ವಜನಿಕ ನ್ಯಾಸ ಆಯುಕ್ತರಿಗೆ ಅಥವಾ ಸಂದರ್ಭಾನುಸಾರ, ನೋಂದಣಿಗಾಗಿನ ಅರ್ಜಿಯು ಯಾರ ಬಳಿಯಲ್ಲಿ ಇತ್ಯರ್ಥದಲ್ಲಿದೆಯೋ ಅವರಿಗೆ ಸಲ್ಲಿಸತಕ್ಕದ್ದು.

(3) ಅಂಥ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಉಪ ಸಾರ್ವಜನಿಕ ನ್ಯಾಸ ಆಯುಕ್ತರು,–

(ಎ) 27ನೇ ಪ್ರಕರಣದಡಿಯಲ್ಲಿ ನೋಂದಣಿಯಾಗಿದೆಯೆಂದು ಭಾವಿಸಲಾದ ಅಥವಾ ಸದರಿ ದಿನಾಂಕಕ್ಕೆ ಮುಂಚೆ ಈ ಅಧಿನಿಯಮದಡಿಯಲ್ಲಿ ನೋಂದಣಿಯಾದ ಸಾರ್ವಜನಿಕ ನ್ಯಾಸದ ಸಂದರ್ಭದಲ್ಲಿ, 16ನೇ ಪ್ರಕರಣದ ಅಡಿಯಲ್ಲಿ ಇಡಲಾದ ರಿಜಿಸ್ಟರಿನಲ್ಲಿ ಅಂಥ ನ್ಯಾಸದ ಸಂಬಂಧದಲ್ಲಿ ಮಾಡಲಾದ ನಮೂದುಗಳ ಎದುರಿಗೆ ಪ್ರತಿಯಾಗಿ ಸಾರ್ವಜನಿಕ ನ್ಯಾಸದ ಹೆಸರನ್ನು ನಿರ್ದಿಷ್ಟಪಡಿಸತಕ್ಕದ್ದು; ಮತ್ತು

(ಬಿ) ಸದರಿ ದಿನಾಂಕದಂದು ನೋಂದಣಿಗಾಗಿ ಅರ್ಜಿಯು ಇತ್ಯರ್ಥದಲ್ಲಿರುವ ಸಾರ್ವಜನಿಕ ನ್ಯಾಸದ ಸಂದರ್ಭದಲ್ಲಿ, 16ನೇ ಪ್ರಕರಣದಡಿಯಲ್ಲಿ ಇಡಲಾದ ರಿಜಿಸ್ಟರಿನಲ್ಲಿ, ಅಂಥ ಸಾರ್ವಜನಿಕ ನ್ಯಾಸದ ಸಂಬಂಧದಲ್ಲಿ 20ನೇ ಪ್ರಕರಣದಡಿಯಲ್ಲಿ ನಮೂದುಗಳನ್ನು ಮಾಡುವ ಸಮಯದಲ್ಲಿ ಸಾರ್ವಜನಿಕ ನ್ಯಾಸದ ಹೆಸರನ್ನು ನಿರ್ದಿಷ್ಟಪಡಿಸತಕ್ಕದ್ದು:

ಪರಂತು, ಬಾಂಬೆ ಸಾರ್ವಜನಿಕ ನ್ಯಾಸ ಅಧಿನಿಯಮ, 1950ರ ಅನುಸೂಚಿ–ಎ ದೊಂದಿಗೆ ಓದಿಕೊಂಡ 32ನೇ ಪ್ರಕರಣದ ಅಡಿಯಲ್ಲಿ ನೋಂದಾಯಿಸಲಾಗಿದೆಯೆಂದು ಭಾವಿಸಲಾದ, ಒಂದು ಸಾರ್ವಜನಿಕ ನ್ಯಾಸದ ಸಂದರ್ಭದಲ್ಲಿ ಅಥವಾ ಬಾಂಬೆ ಸಾರ್ವಜನಿಕ ನ್ಯಾಸ ಅಧಿನಿಯಮ, 1950ರ 20ನೇ ಪ್ರಕರಣದಡಿಯಲ್ಲಿ ಸಲ್ಲಿಸಲಾಗಿರುವ ಅರ್ಜಿಯ ಸಂಬಂಧದಲ್ಲಿ ಮತ್ತು ಸದರಿ ದಿನಾಂಕದಂದು ಸಲ್ಲಿಸಲಾಗಿರುವಂಥ ಅರ್ಜಿಯ ಸಂಬಂಧದಲ್ಲಿ, ಅಂಥ ಸಾರ್ವಜನಿಕ ನ್ಯಾಸದ ಸಂದರ್ಭದಲ್ಲಿ, ಅಂಥ ಸಾರ್ವಜನಿಕ ನ್ಯಾಸದ ನ್ಯಾಸಧಾರಿಯು, ಅಂಥ ಸಾರ್ವಜನಿಕ ನ್ಯಾಸದ ಸ್ಥಿರಾಸ್ತಿಗೆ ಸಂಬಂಧಿಸಿದಂತೆ ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಆರು ತಿಂಗಳೊಳಗೆ, ನೋಂದಣಿಯ ಉದ್ದೇಶಕ್ಕಾಗಿ, 17ನೇ ಪ್ರಕರಣದ (6)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಅಧಿಕಾರಿಗಳಿಗೆ ಸಲ್ಲಿಸುವ ತನ್ನ ಅರ್ಜಿಯಲ್ಲಿ ಸಾರ್ವಜನಿಕ ನ್ಯಾಸದ ಹೆಸರು ಹಾಗೂ ವಿವರಣೆಗಳನ್ನು ಒಳಗೊಂಡ, ನಿಯಮಿಸಲಾದ ನಮೂನೆಯಲ್ಲಿ ಜ್ಞಾಪನ ಪತ್ರವನ್ನು ಕಳುಹಿಸಕೊಡತಕ್ಕದ್ದು. ಅಂಥ ಜ್ಞಾಪನ ಪತ್ರಕ್ಕೆ ನ್ಯಾಸಧಾರಿ ಅಥವಾ ಈ ಸಂಬಂಧದಲ್ಲಿ ಆತನಿಂದ ವಿಶೇಷವಾಗಿ ಪ್ರಾಧಿಕೃತನಾದ ಆತನ ಏಜೆಂಟನು ನಿಯಮಿಸಲಾದ ರೀತಿಯಲ್ಲಿ ಸಹಿ ಮಾಡತಕ್ಕದ್ದು ಮತ್ತು ಸತ್ಯಾಪನೆ ಮಾಡತಕ್ಕದ್ದು.

**24. ನ್ಯಾಸ ಸ್ವತ್ತು ಹಲವಾರು ಪ್ರದೇಶಗಳಲ್ಲಿ ಇದ್ದಾಗಿನ ಕಾರ್ಯವಿಧಾನ,–** ಯಾವುದೇ ಸಾರ್ವಜನಿಕ ನ್ಯಾಸದ ಸ್ವತ್ತಿನ ಯಾವುದೇ ಭಾಗವು, ಒಂದಕ್ಕಿಂತ ಹೆಚ್ಚು ಪ್ರದೇಶದ ಪರಿಮಿತಿಗಳೊಳಗೆ ಇದ್ದರೆ, ಆ ಸಾರ್ವಜನಿಕ ನ್ಯಾಸವನ್ನು ನೋಂದಣಿ ಮಾಡಲಾಗಿರುವ ಪ್ರದೇಶಗಳಲ್ಲಿರುವ ಉಪ ಸಾರ್ವಜನಿಕ ನ್ಯಾಸ ಆಯುಕ್ತರು, ನ್ಯಾಸದ ಸ್ವತ್ತಿನ ಅಂಥ ಭಾಗವು ಇರುವ ಆ ಪ್ರದೇಶದ ಪ್ರಭಾರದಲ್ಲಿರುವ ಉಪ ಸಾರ್ವಜನಿಕ ನ್ಯಾಸ ಆಯುಕ್ತರಿಗೆ ನಮೂದುಗಳ ಪ್ರತಿಯನ್ನು ಕಳುಹಿಸತಕ್ಕದ್ದು. ಅಂಥ ಪ್ರದೇಶಗಳ ಪ್ರಭಾರದಲ್ಲಿರುವ ಉಪ ಸಾರ್ವಜನಿಕ ನ್ಯಾಸ ಆಯುಕ್ತರು ಈ ಉದ್ದೇಶಕ್ಕಾಗಿ ನಿಯಮಿಸಬಹುದಾದಂಥ ಪುಸ್ತಕದಲ್ಲಿ ನಮೂದನ್ನು ಮಾಡತಕ್ಕದ್ದು. ಅಂಥ ನಮೂದಿನ ಒಂದು ಪ್ರತಿಯನ್ನು, ಉಪ ಸಾರ್ವಜನಿಕ ನ್ಯಾಸ ಆಯುಕ್ತರು, ಅಂಥ ಸ್ವತ್ತು ಅಥವಾ ಅದರ ಭಾಗವು ಯಾವ ಪ್ರದೇಶದ ಪರಿಮಿತಿಗಳೊಳಗೆ ಇದೆಯೋ ಆ ಪ್ರದೇಶಕ್ಕೆ ಸಂಬಂಧಪಟ್ಟ ಉಪ ನೋಂದಣಾಧಿಕಾರಿಗಳಿಗೆ, ನೋಂದಣಿಯ ಉದ್ದೇಶಕ್ಕಾಗಿ ಕಳುಹಿಸತಕ್ಕದ್ದು.

**25. ಸಾರ್ವಜನಿಕ ನ್ಯಾಸಕ್ಕೆ ಸಂಬಂಧಿಸಿದ ವಿಚಾರಣೆಯನ್ನು ಒಬ್ಬರಿಗಿಂತ ಹೆಚ್ಚಿನ ಉಪ ಸಾರ್ವಜನಿಕ ನ್ಯಾಸ ಆಯುಕ್ತರು ನಡೆಸತಕ್ಕದ್ದಲ್ಲ.–** (1) ಯಾವುದೇ ಸಾರ್ವಜನಿಕ ನ್ಯಾಸದ ಸಂಬಂಧದಲ್ಲಿ 18 ಅಥವಾ 22ನೇ ಪ್ರಕರಣಗಳ ಅಡಿಯಲ್ಲಿಯ ವಿಚಾರಣೆಯು, ಒಬ್ಬ ಅಥವಾ ಒಬ್ಬರಿಗಿಂತ ಹೆಚ್ಚು ಉಪ ಸಾರ್ವಜನಿಕ ನ್ಯಾಸ ಆಯುಕ್ತರ ಮುಂದೆ ಇತ್ಯರ್ಥವಾಗದೇ ಉಳಿದಿದ್ದಲ್ಲಿ, ಸಾರ್ವಜನಿಕ ನ್ಯಾಸ ಆಯೋಗವು, ಅಂಥ ಸಾರ್ವಜನಿಕ ನ್ಯಾಸದಲ್ಲಿ ಹಿತಾಸಕ್ತಿಯನ್ನು ಹೊಂದಿರುವ ಯಾರೇ ವ್ಯಕ್ತಿಗಳ ಅರ್ಜಿಯ ಮೇಲೆ ಅಥವಾ ಯಾವ ಉಪ ಸಾರ್ವಜನಿಕ ನ್ಯಾಸ ಆಯುಕ್ತರ ಮುಂದೆ ಅಂಥ ವಿಚಾರಣೆಯು ಇತ್ಯರ್ಥದಲ್ಲಿದೆಯೋ ಅವರ ಅಥವಾ ಸ್ವತಃ ಅವರೇ ಆಗಲಿ, ಯಾವ ಉಪ ಸಾರ್ವಜನಿಕ ನ್ಯಾಸ ಆಯುಕ್ತರು ಅಂಥ ನ್ಯಾಸದ ಸಂಬಂಧದಲ್ಲಿ ವಿಚಾರಣೆಯನ್ನು ಮುಂದುವರೆಸತಕ್ಕದೆಂಬುದನ್ನು ನಿರ್ಧರಿಸತಕ್ಕದ್ದು.

(2) (1)ನೇ ಉಪ ಪ್ರಕರಣದಡಿಯಲ್ಲಿ, ಸಾರ್ವಜನಿಕ ನ್ಯಾಸ ಆಯೋಗದ ತೀರ್ಮಾನವು ಅಂತಿಮ ಹಾಗೂ ನಿರ್ಣಾಯಕವಾಗಿರತಕ್ಕದ್ದು; ಮತ್ತು ಅಂಥ ತೀರ್ಮಾನದ ಮೇಲೆ ಸಾರ್ವಜನಿಕ ನ್ಯಾಸ ಆಯೋಗವು ನಿರ್ದಿಷ್ಟಪಡಿಸಿದ ಉಪ ಸಾರ್ವಜನಿಕ ನ್ಯಾಸ ಆಯುಕ್ತರನ್ನು ಹೊರತುಪಡಿಸಿ, ಯಾವೊಬ್ಬ ಉಪ ಸಾರ್ವಜನಿಕ ನ್ಯಾಸ ಆಯುಕ್ತರು 18 ನೇ ಪ್ರಕರಣದ ಅಡಿಯಲ್ಲಿ ಅಥವಾ ಸಂದರ್ಭಾನುಸಾರ 22ನೇ ಪ್ರಕರಣದಡಿಯಲ್ಲಿ ಸಾರ್ವಜನಿಕ ನ್ಯಾಸದ ಸಂಬಂಧದಲ್ಲಿಯ ವಿಚಾರಣೆಯನ್ನು ಮುಂದುವರೆಸತಕ್ಕದ್ದಲ್ಲ.

**26. ಕೆಲವು ಪ್ರಕರಣಗಳಲ್ಲಿ ರಿಜಿಸ್ಟರಿನಲ್ಲಿ ಮಾಡಬೇಕಾದ ನಮೂದುಗಳು ಅಥವಾ ತಿದ್ದುಪಡಿ.–**(1) ಯಾವುದೇ ಸಾರ್ವಜನಿಕ ನ್ಯಾಸಕ್ಕೆ ಸಂಬಂಧಿಸಿದ ಯಾವುದೇ ಪ್ರಶ್ನೆಯನ್ನು ತೀರ್ಮಾನಿಸುವ ಸಕ್ಷಮ ಅಧಿಕಾರ ವ್ಯಾಪ್ತಿಯನ್ನುಳ್ಳ ಯಾವುದೇ ನ್ಯಾಯಾಲಯವು ಈ ಅಧಿನಿಯಮದ ಉಪಬಂಧಗಳ ಮೂಲಕ ಅಥವಾ ಅದರಡಿಯಲ್ಲಿ ತೀರ್ಮಾನಿಸುವುದರಿಂದ ಸ್ಪಷ್ಟವಾಗಿ ಅಥವಾ ಇಂಗಿತವಾಗಿ ನಿಷೇಧಿಸಲ್ಪಟ್ಟಿರದಿದ್ದರೆ, ಅಂಥ ತೀರ್ಮಾನದ ಒಂದು ಪ್ರತಿಯನ್ನು ಸಾರ್ವಜನಿಕ ನ್ಯಾಸ ಆಯೋಗಕ್ಕೆ ಕಳುಹಿಸುವಂತೆ ಮಾಡತಕ್ಕದ್ದು ಮತ್ತು ಸಾರ್ವಜನಿಕ ನ್ಯಾಸ ಆಯೋಗವು, ಅಂಥ ತೀರ್ಮಾನಕ್ಕೆ ಅನುಸಾರವಾಗಿ ಅಂಥ ಸಾರ್ವಜನಿಕ ನ್ಯಾಸದ ಸಂಬಂಧದಲ್ಲಿ 16ನೇ ಪ್ರಕರಣದಡಿಯಲ್ಲಿ ಇಟ್ಟಿರುವ ರಿಜಿಸ್ಟರಿನಲ್ಲಿ ಮಾಡಬೇಕಾದ ನಮೂದುಗಳನ್ನು ಅಥವಾ ತಿದ್ದುಪಡಿಯನ್ನು ಮಾಡುವಂತೆ ಮಾಡತಕ್ಕದ್ದು. ಹಾಗೆ ಮಾಡಲಾದ ಅಥವಾ ತಿದ್ದುಪಡಿ ಮಾಡಲಾದ ನಮೂದುಗಳನ್ನು ಅಧಿಕಾರ ವ್ಯಾಪ್ತಿಯ ಸಕ್ಷಮ ನ್ಯಾಯಾಲಯದಿಂದ ಅಪೀಲಿನಲ್ಲಿ ಅಥವಾ ಪರಿಷ್ಕರಣೆಯಲ್ಲಿ ಅಂಥ ನಿರ್ಧಾರವನ್ನು ವ್ಯತ್ಯಾಸಗೊಳಿಸಲಾದ ಪ್ರಕರಣಗಳನ್ನು ಹೊರತುಪಡಿಸಿ, ಬದಲಾಯಿಸತಕ್ಕದ್ದಲ್ಲ. ಅಂಥ ಬದಲಾವಣೆಗಳಿಗೆ ಒಳಪಟ್ಟು ಮಾಡಲಾದ ಅಥವಾ ತಿದ್ದುಪಡಿ ಮಾಡಿದ ನಮೂದುಗಳು ಅಂತಿಮವಾಗಿರತಕ್ಕದ್ದು ಮತ್ತು ನಿರ್ಣಾಯಕವಾಗಿರತಕ್ಕದ್ದು.

(2) ಯಾವುದೇ ಸಾರ್ವಜನಿಕ ನ್ಯಾಸದ ಸಂಬಂಧದಲ್ಲಿ ಯಾವುದೇ ಪ್ರಶ್ನೆಯನ್ನು ಸಾರ್ವಜನಿಕ ನ್ಯಾಸ ಆಯೋಗವು ನಿರ್ಧರಿಸಿದ್ದಲ್ಲಿ ಅದಕ್ಕೆ ಸಂಬಂಧಿಸಿದಂತೆ ಯಾವುದೇ ಆದೇಶವನ್ನು ಹೊರಡಿಸಿದಲ್ಲಿ, ಸಾರ್ವಜನಿಕ ನ್ಯಾಸದ ಸಂಬಂಧದಲ್ಲಿ, ಅದು ತೆಗೆದುಕೊಂಡ ತೀರ್ಮಾನ ಅಥವಾ ಹೊರಡಿಸಲಾದ ಆದೇಶಗಳಿಗನುಸಾರವಾಗಿ ರಿಜಿಸ್ಟರಿನಲ್ಲಿ ಮಾಡಬೇಕಾದ ಅಥವಾ ತಿದ್ದುಪಡಿಯಾಗಬೇಕಾದ ನಮೂದುಗಳನ್ನು ಮಾಡುವಂತೆ ಮಾಡತಕ್ಕದ್ದು ಆ ತರುವಾಯ ಮತ್ತು (1)ನೇ ಉಪಪ್ರಕರಣದ ಉಪಬಂಧಗಳನ್ನು, ನ್ಯಾಯಾಲಯದ ತೀರ್ಮಾನಕ್ಕೆ ಅಥವಾ ಆದೇಶಕ್ಕೆ ಅನುಸಾರವಾಗಿ ಮಾಡಬೇಕಾದ ಅಥವಾ ತಿದ್ದುಪಡಿಯಾಗಬೇಕಾದ ನಮೂದುಗಳ ಸಂಬಂಧದಲ್ಲಿ, ಅವುಗಳನ್ನು ಅನ್ವಯಿಸುವಂತೆಯೇ, ಮಾಡಿದ ಅಥವಾ ತಿದ್ದುಪಡಿಯಾದ ನಮೂದುಗಳ ಸಂಬಂಧದಲ್ಲಿ ಅನ್ವಯಿಸತಕ್ಕದ್ದು.

**27. ನಿರಸನಗೊಂಡ ಅಧಿನಿಯಮಗಳು ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನ ಅಡಿಯಲ್ಲಿ ಈ ಮೊದಲೇ ನೋಂದಣಿಯಾದ ಸಾರ್ವಜನಿಕ ನ್ಯಾಸಗಳನ್ನು ಈ ಅಧಿನಿಯಮದ ಅಡಿಯಲ್ಲಿ ನೋಂದಣಿಯಾಗಿವೆಯೆಂದು ಭಾವಿಸುವುದು.–** (1) ಯಾವುವೇ ನಿರಸನಗೊಂಡ ಅಧಿನಿಯಮಗಳ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಉಪಬಂಧಗಳ ಅಡಿಯಲ್ಲಿ ನೋಂದಣಿಯಾದ ರಾಜ್ಯದಲ್ಲಿನ ಎಲ್ಲಾ ಸಾರ್ವಜನಿಕ ನ್ಯಾಸಗಳನ್ನು, ಈ ಅಧಿನಿಯಮವನ್ನು ಅಂಥ ಸಾರ್ವಜನಿಕ ನ್ಯಾಸಕ್ಕೆ ಅನ್ವಯಿಸಬಹುದಾದ ದಿನಾಂಕದಿಂದ ಈ ಅಧಿನಿಯಮದ ಅಡಿಯಲ್ಲಿ ನೋಂದಣಿ ಮಾಡಲಾಗಿದೆ ಎಂದು ಭಾವಿಸತಕ್ಕದ್ದು. ಯಾವುವೇ ಸದರಿ ಅಧಿನಿಯಮಗಳ ಅಡಿಯಲ್ಲಿ ನೋಂದಣಿಯಾದ ಸಾರ್ವಜನಿಕ ನ್ಯಾಸದ ಪರಿಮಿತಿಗಳೊಳಗೆ ಇರುವ ಉಪ ಸಾರ್ವಜನಿಕ ನ್ಯಾಸ ಆಯುಕ್ತರು, 16ನೇ ಪ್ರಕರಣದಡಿಯಲ್ಲಿ ಇಟ್ಟಿರುವ ರಿಜಿಸ್ಟರಿನಲ್ಲಿ, ಅಂಥ ನ್ಯಾಸಕ್ಕೆ ಸಂಬಂಧಿಸಿದ ನಮೂದುಗಳನ್ನು ದಾಖಲಿಸುವ ಉದ್ದೇಶಕ್ಕಾಗಿ ಅಂಥ ನ್ಯಾಸದ ನ್ಯಾಸಧಾರಿಗೆ ನೋಟೀಸನ್ನು ನೀಡತಕ್ಕದ್ದು ಮತ್ತು ನ್ಯಾಸಧಾರಿಯ ಸುನಾವಣೆ ಮಾಡಿದ ನಂತರ ಹಾಗೂ ನಿಯಮಿಸಬಹುದಾದಂತೆ ವಿಚಾರಣೆಯನ್ನು ಮಾಡಿದ ನಂತರ ಅದಕ್ಕೆ ಸಂಬಂಧಿಸಿದ ಕಾರಣಗಳೊಂದಿಗೆ ನಿರ್ಣಯಗಳನ್ನು ದಾಖಲಿಸತಕ್ಕದ್ದು. ಅಂಥ ನಿರ್ಣಯಗಳು, ಅವಶ್ಯಕ ಅಥವಾ ಯುಕ್ತವಾಗಬಹುದಾದಂಥ ಬದಲಾವಣೆಗಳಿಗೆ ಒಳಪಟ್ಟು, ಸದರಿ ಅಧಿನಿಯಮದ ಅಡಿಯಲ್ಲಿ ರಿಜಿಸ್ಟರಿನಲ್ಲಿ ಈಗಾಗಲೇ ಮಾಡಲಾದ ನಮೂದುಗಳಿಗನುಸಾರವಾಗಿರತಕ್ಕದ್ದು.

(2) (1)ನೇ ಉಪ–ಪ್ರಕರಣದ ಅಡಿಯಲ್ಲಿ ದಾಖಲಿಸಿದ ಯಾವುದೇ ನಿರ್ಣಯಗಳಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು ಸಾರ್ವಜನಿಕ ನ್ಯಾಸ ಆಯೋಗಕ್ಕೆ ಅಪೀಲು ಸಲ್ಲಿಸಬಹುದು.

**28. ಉಪ ನೋಂದಣಾಧಿಕಾರಿ, ಕಂದಾಯ ಮತ್ತು ಸ್ಥಳೀಯ ಪ್ರಾಧಿಕಾರಗಳಿಗೆ ಕಳುಹಿಸಬೇಕಾದ ಸ್ಥಿರಸ್ವತ್ತುಗಳಿಗೆ ಸಂಬಂಧಿಸಿದ ನಮೂದುಗಳ ಪ್ರತಿ.–** ಉಪ ಸಾರ್ವಜನಿಕ ನ್ಯಾಸ ಆಯುಕ್ತರು, 16ನೇ ಪ್ರಕರಣದ ಅಡಿಯಲ್ಲಿ ಇಡಲಾದ ರಿಜಿಸ್ಟರಿನಲ್ಲಿ, ಆತನು ಮಾಡಿದ ಅಂಥ ಸಾರ್ವಜನಿಕ ನ್ಯಾಸದ ಸ್ಥಿರಸ್ವತ್ತಿಗೆ ಸಂಬಂಧಿಸಿದಂತೆ, ಸಾರ್ವಜನಿಕ ನ್ಯಾಸದ ಹೆಸರು ಮತ್ತು ವಿವರಣೆಯ ನಮೂದು ಒಳಗೊಂಡಂತೆ ನಮೂದಗಳನ್ನು ಒಳಗೊಂಡಿರುವ, ನಿಯಮಿಸಲಾದ ನಮೂನೆಯಲ್ಲಿನ ಒಂದು ಜ್ಞಾಪನಪತ್ರವನ್ನು ಅಂಥ ಸ್ಥಿರಸ್ವತ್ತು ಇರುವ ಪ್ರದೇಶದ ನೋಂದಣಿಯ ಉದ್ದೇಶಕ್ಕಾಗಿ ಸಂಬಂಧಪಟ್ಟ ಉಪ ನೋಂದಣಾಧಿಕಾರಿಗೆ ಕಳುಹಿಸತಕ್ಕದ್ದು.

**29. ಉಯಿಲಿನ ಮೂಲಕ ಸೃಜಿಸಲಾದ ಸಾರ್ವಜನಿಕ ನ್ಯಾಸ.–** ಉಯಿಲಿನ ಮೂಲಕ ಸೃಜಿಸಲಾದ ಸಾರ್ವಜನಿಕ ನ್ಯಾಸದ ಸಂದರ್ಭದಲ್ಲಿ, ಅಂಥ ಉಯಿಲಿನ ನಿರ್ವಾಹಕನು, ಉಯಿಲಿನ ಪ್ರೊಬೇಟು ಮಂಜೂರಾದ ದಿನಾಂಕದಿಂದ ಒಂದು ತಿಂಗಳೊಳಗೆ ಅಥವಾ ಉಯಿಲುದಾರನ ಮರಣದ ದಿನಾಂಕದಿಂದ ಆರು ತಿಂಗಳೊಳಗೆ, ಇವೆರಡರಲ್ಲಿ ಯಾವುದು ಮೊದಲೋ, ಆ ಅವಧಿಯೊಳಗೆ, 17ನೇ ಪ್ರಕರಣದಲ್ಲಿ ಉಪಬಂಧಿಸಿದ ವಿಧಾನದಲ್ಲಿ ನೋಂದಣಿಗಾಗಿ ಅರ್ಜಿಯನ್ನು ಸಲ್ಲಿಸತಕ್ಕದ್ದು ಮತ್ತು ಈ ಅಧ್ಯಾಯದ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ಅಂಥ ನ್ಯಾಸದ ನೋಂದಣಿಗೆ ಅನ್ವಯವಾಗತಕ್ಕದ್ದು:

ಪರಂತು, ನೋಂದಣಿಗಾಗಿ ಅರ್ಜಿಯನ್ನು ಸಲ್ಲಿಸುವುದಕ್ಕಾಗಿ ಇದರಲ್ಲಿ ನಿಯಮಿಸಲಾದ ಅವಧಿಯನ್ನು, ಸಾಕಷ್ಟು ಕಾರಣಕ್ಕಾಗಿ, ಸಂಬಂಧಪಟ್ಟ ಉಪ ಸಾರ್ವಜನಿಕ ನ್ಯಾಸ ಆಯುಕ್ತರು, ವಿಸ್ತರಿಸಬಹುದು.

**30. ರಿಜಿಸ್ಟರಿನಲ್ಲಿ ನಮೂದಿಸಲಾದ ಸ್ಥಿರಸ್ವತ್ತಿನ ವಿವರಗಳನ್ನು ಗಮನಿಸುವುದು.–** ಈ ಅಧ್ಯಾಯದಡಿಯಲ್ಲಿ ನೋಂದಣಿಯಾದ ಸಾರ್ವಜನಿಕ ನ್ಯಾಸಕ್ಕೆ ಸೇರಿದ ಯಾವುದೇ ಸ್ಥಿರಸ್ವತ್ತನ್ನು ಅಥವಾ ಅಂಥ ನ್ಯಾಸದ ಅಂಥ ಸ್ವತ್ತಿನ ಯಾವುದೇ ಭಾಗವನ್ನು ಅಥವಾ ಯಾವುದೇ ಷೇರನ್ನು ಅಥವಾ ಹಿತಾಸಕ್ತಿಯನ್ನು ಆರ್ಜನೆ ಮಾಡುವ ಯಾವೊಬ್ಬ ವ್ಯಕ್ತಿಯು, 16ನೇ ಪ್ರಕರಣದ ಅಡಿಯಲ್ಲಿ ಅಥವಾ ಉಪ ನೋಂದಣಾಧಿಕಾರಿಯ ಕಛೇರಿಯಲ್ಲಿ ನಿರ್ವಹಿಸುತ್ತಿರುವ ರಿಜಿಸ್ಟರುಗಳಲ್ಲಿ ನಮೂದಿಸಲಾದ ಅಂಥ ನ್ಯಾಸದ ಬಗ್ಗೆ ಸಂಬಂಧಪಟ್ಟ ವಿವರಣೆಗಳನ್ನು ಗಮನಿಸಿರುವನೆಂದು ಭಾವಿಸತಕ್ಕದ್ದು.

**ವಿವರಣೆ.**– ಈ ಪ್ರಕರಣದ ಉದ್ದೇಶಗಳಿಗಾಗಿ, ಒಬ್ಬ ವ್ಯಕ್ತಿಯು,–

(1) ಆತನು ಸದರಿ ವಿವರಗಳನ್ನು ವಾಸ್ತವಿಕವಾಗಿ ತಿಳಿದಾಗ, ಅಥವಾ, ಯಾವುದೇ ವಿಚಾರಣೆಗೆ ಉದ್ದೇಶಪೂರ್ವಕವಲ್ಲದಿದ್ದರೂ ಗೈರುಹಾಜರಾದಾಗ ಅಥವಾ ಆತನು ಮಾಡಲೇ ಬೇಕಾದ ಯಾವುದೇ ಶೋಧವನ್ನು ಮಾಡದಿದ್ದಾಗ ಅಥವಾ ಅವುಗಳನ್ನು ಆತನು ತಿಳಿದಿದ್ದರೂ ಆತನು ಒಟ್ಟಾರೆ ನಿರ್ಲಕ್ಷ್ಯ ತೋರಿದಾಗ;

(2) ಅಂಥ ವಿವರಗಳಲ್ಲಿರುವ ಸಂಗತಿಯು ಮುಖ್ಯ ಅಂಶವಾಗಿರುವ ವ್ಯವಹಾರದಲ್ಲಿ ಆತನ ಪರವಾಗಿ ಕಾರ್ಯ ನಿರ್ವಹಿಸುತ್ತಿರುವ ಆತನ ಏಜೆಂಟನು ಅದನ್ನು ಗಮನಿಸಿದಾಗ,

–ರಿಜಿಸ್ಟರಿನಲ್ಲಿಯ ಯಾವುದೇ ವಿವರಗಳನ್ನು ಗಮನಿಸಿರುವನೆಂದು ಭಾವಿಸತಕ್ಕದ್ದು.

**31. ದಾವೆಗಳ ಸುನಾವಣೆ ಅಥವಾ ತೀರ್ಮಾನಕ್ಕೆ ನಿಷೇಧ.**– (1) ಈ ಅಧಿನಿಯಮದ ಅಡಿಯಲ್ಲಿ ನೋಂದಣಿಯಾಗದ ಸಾರ್ವಜನಿಕ ನ್ಯಾಸದ ಪರವಾಗಿ ಹಕ್ಕನ್ನು ಜಾರಿಗೊಳಿಸುವುದಕ್ಕಾಗಿ ಯಾವುದೇ ದಾವೆಯು ಯಾವುದೇ ನ್ಯಾಯಾಲಯದಲ್ಲಿ ಸುನಾವಣೆಗೊಳ್ಳತಕ್ಕದ್ದಲ್ಲ ಅಥವಾ ತೀರ್ಮಾನಗೊಳ್ಳತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಉಪಬಂಧಗಳು, ಅಂಥ ಸಾರ್ವಜನಿಕ ನ್ಯಾಸದ ಪರವಾಗಿ ಹಕ್ಕನ್ನು ಜಾರಿಗೆ ತರುವುದಕ್ಕಾಗಿ ವಜಾ ಮಾಡುವ ಅಥವಾ ಇತರ ವ್ಯವಹರಣೆಗಳ ಕ್ಲೇಮಿಗೆ, ಅನ್ವಯವಾಗತಕ್ಕದ್ದು.

## ಅಧ್ಯಾಯ – V

## ಆಯವ್ಯಯ ಪತ್ರ, ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ

**32. ಕೆಲವು ನ್ಯಾಸಗಳ ನ್ಯಾಸಧಾರಿಗಳು ಉಪ ಸಾರ್ವಜನಿಕ ಆಯುಕ್ತರಿಗೆ ಆಯವ್ಯಯ ಪತ್ರವನ್ನು ಸಲ್ಲಿಸುವುದು.**– (1) ನಿಯಮಿಸಲಾದ ಮೊತ್ತವನ್ನು ಮೀರಿದ ವಾರ್ಷಿಕ ಆದಾಯವನ್ನು ಹೊಂದಿದ ಸಾರ್ವಜನಿಕ ನ್ಯಾಸದ ನ್ಯಾಸಧಾರಿಯು, ಪ್ರತಿಯೊಂದು ಆರ್ಥಿಕ ವರ್ಷವು ಪ್ರಾರಂಭವಾಗುವುದಕ್ಕೆ ಕನಿಷ್ಠ ಒಂದು ತಿಂಗಳಿಗೆ ಮೊದಲು, ಮುಂದಿನ ವರ್ಷದಲ್ಲಿ ನ್ಯಾಸದ ಸಂಭವನೀಯ ಸ್ವೀಕೃತಿಗಳು ಮತ್ತು ಬಟವಾಡೆಗಳನ್ನು ತೋರಿಸುವ ಆಯವ್ಯಯ ಪತ್ರವನ್ನು, ನಿಯಮಿಸಬಹುದಾದ ನಮೂನೆಯಲ್ಲಿ ತಯಾರಿಸಿ ಉಪ ಸಾರ್ವಜನಿಕ ನ್ಯಾಸ ಆಯುಕ್ತರಿಗೆ ಸಲ್ಲಿಸತಕ್ಕದ್ದು.

(2) ಪ್ರತಿಯೊಂದು ಅಂಥ ಆಯವ್ಯಯ ಪತ್ರವು ನ್ಯಾಸದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ ಮತ್ತು ನ್ಯಾಸದ ಸ್ವತ್ತಿನ ನಿರ್ವಹಣೆಗಾಗಿ ಹಾಗೂ ಸಂರಕ್ಷಣೆಗಾಗಿ ಸಾಕಷ್ಟು ಅವಕಾಶವನ್ನು ಒದಗಿಸತಕ್ಕದ್ದು.

**33. ಲೆಕ್ಕಪತ್ರಗಳ ನಿರ್ವಹಣೆ.**– (1) ಸಾರ್ವಜನಿಕ ನ್ಯಾಸದ ಪ್ರತಿಯೊಬ್ಬ ನ್ಯಾಸಧಾರಿಯು ಕ್ರಮಬದ್ಧವಾದ ಲೆಕ್ಕಪತ್ರಗಳನ್ನು ಇಡತಕ್ಕದ್ದು.

(2) ಅಂಥ ಲೆಕ್ಕಪತ್ರಗಳನ್ನು ನಿಯಮಿಸಬಹುದಾದ ಅಂಥ ನಮೂನೆಯಲ್ಲಿ ಇಡತಕ್ಕದ್ದು ಮತ್ತು ಅದು ಅಂಥ ವಿವರಗಳನ್ನು ಒಳಗೊಳ್ಳತಕ್ಕದ್ದು.

**34. ಲೆಕ್ಕಪತ್ರಗಳ ಲೆಕ್ಕಪರಿಶೋಧನೆ.**– (1) 33ನೇ ಪ್ರಕರಣದಲ್ಲಿ ಇಡಲಾದ ಲೆಕ್ಕಪತ್ರಗಳನ್ನು, ಪ್ರತಿ ವರ್ಷದ ಮಾರ್ಚ್ ಮೂವತ್ತೊಂದನೇ ದಿನಾಂಕಕ್ಕೆ ಮೊದಲು ಅಥವಾ ಸಾರ್ವಜನಿಕ ನ್ಯಾಸ ಆಯೋಗವು ನಿರ್ದಿಷ್ಟಪಡಿಸಬಹುದಾದ ಅಂಥ ಇತರ ದಿನಾಂಕದಂದು ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು.

(2) ಲೆಕ್ಕಪತ್ರಗಳನ್ನು, ಚಾರ್ಟರ್ಡ್ ಅಕೌಂಟೆಂಟುಗಳ ಅಧಿನಿಯಮ, 1949ರ ಅರ್ಥ ವ್ಯಾಪ್ತಿಯೊಳಗೆ ಚಾರ್ಟರ್ಡ್ ಅಕೌಂಟೆಂಟ್ ಎಂದು ಕರೆಯಲಾಗುವ ವ್ಯಕ್ತಿಯಿಂದ ಅಥವಾ ರಾಜ್ಯ ಸರ್ಕಾರವು, ಯಾವುದೇ ಷರತ್ತುಗಳಿಗೊಳಪಟ್ಟು, ಈ ಸಂಬಂಧದಲ್ಲಿ ಪ್ರಾಧಿಕೃತಗೊಳಿಸಿದ ವ್ಯಕ್ತಿಯಿಂದ, ವಾರ್ಷಿಕವಾಗಿ ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು:

ಪರಂತು, ಅಂಥ ವ್ಯಕ್ತಿಯು, ಯಾವುದೇ ರೀತಿಯಲ್ಲಿ, ಸಾರ್ವಜನಿಕ ನ್ಯಾಸದಲ್ಲಿ ಹಿತಾಸಕ್ತಿ ಹೊಂದಿರತಕ್ಕದ್ದಲ್ಲ ಅಥವಾ ಅದರೊಡನೆ ಸಂಬಂಧವನ್ನು ಹೊಂದಿರತಕ್ಕದ್ದಲ್ಲ.

(3) (2)ನೇ ಉಪಪ್ರಕರಣದಡಿಯಲ್ಲಿ ಉಲ್ಲೇಖಿಸಿದ ಪ್ರತಿಯೊಬ್ಬ ಲೆಕ್ಕಪರಿಶೋಧಕನು, ಎಲ್ಲಾ ಲೆಕ್ಕಪತ್ರಗಳು ಮತ್ತು ನ್ಯಾಸಧಾರಿಯ ಸ್ವಾಧೀನದಲ್ಲಿರುವ ಅಥವಾ ಅವನ ನಿಯಂತ್ರಣದಲ್ಲಿರುವ ಎಲ್ಲಾ ಪುಸ್ತಕಗಳು, ವೋಚರುಗಳು, ಇತರ ದಾಖಲೆಗಳು ಮತ್ತು ದಸ್ತಾವೇಜುಗಳನ್ನು ನೋಡಲು ಅವಕಾಶವಿರತಕ್ಕದ್ದು; ಮತ್ತು ಲೆಕ್ಕಪರಿಶೋಧಕನು ಬಳಸಲು ಅವು ಲಭ್ಯವಾಗುವಂತೆ ಮಾಡುವುದು ನ್ಯಾಸಧಾರಿಯ ಕರ್ತವ್ಯವಾಗಿರತಕ್ಕದ್ದು.

(4) ಹಿಂದಿನ ಉಪಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ, ಉಪ ಸಾರ್ವಜನಿಕ ನ್ಯಾಸ ಆಯುಕ್ತರು, ಯಾವುದೇ ಸಾರ್ವಜನಿಕ ನ್ಯಾಸದ ಲೆಕ್ಕಪತ್ರಗಳ ವಿಶೇಷ ಲೆಕ್ಕ ಪರಿಶೋಧನೆಯು ಅವಶ್ಯವೆನಿಸಿದೆಯೆಂದು ಅಭಿಪ್ರಾಯಪಟ್ಟಲ್ಲಿ, ಅಂಥ ವಿಶೇಷ ಲೆಕ್ಕಪರಿಶೋಧನೆಗೆ ನಿರ್ದೇಶಿಸಬಹುದು. (2) ಮತ್ತು (3)ನೇ ಉಪಪ್ರಕರಣಗಳ ಉಪಬಂಧಗಳು, ಅವುಗಳು ಅನ್ವಯವಾಗಬಹುದಾದಷ್ಟರ ಮಟ್ಟಿಗೆ, ಅಂಥ ವಿಶೇಷ ಲೆಕ್ಕಪರಿಶೋಧನೆಗೆ ಅನ್ವಯವಾಗತಕ್ಕದ್ದು. ಉಪ ಸಾರ್ವಜನಿಕ ನ್ಯಾಸ ಆಯುಕ್ತರು ಅಂಥ ವಿಶೇಷ ಲೆಕ್ಕಪರಿಶೋಧನೆಗೆ ನಿಯಮಿಸಬಹುದಾದಂಥ ಶುಲ್ಕವನ್ನು ಸಂದಾಯ ಮಾಡುವಂತೆ ನಿರ್ದೇಶಿಸಬಹುದು.

**35. ಜಮಾಖರ್ಚು ಪಟ್ಟಿಯನ್ನು ತಯಾರಿಸುವುದು ಮತ್ತು ಅಕ್ರಮ ಮುಂತಾದವುಗಳನ್ನು ವರದಿ ಮಾಡುವುದು ಲೆಕ್ಕ ಪರಿಶೋಧಕರ ಕರ್ತವ್ಯ.**– (1) 34ನೇ ಪ್ರಕರಣದ ಅಡಿಯಲ್ಲಿ ಸಾರ್ವಜನಿಕ ನ್ಯಾಸದ ಲೆಕ್ಕಪತ್ರಗಳ ಲೆಕ್ಕಪರಿಶೋಧನೆ ಮಾಡುವ ಪ್ರತಿಯೊಬ್ಬ ಲೆಕ್ಕಪರಿಶೋಧಕರು ಜಮಾ ಖರ್ಚು ಪಟ್ಟಿ ಹಾಗೂ ಆದಾಯ ಮತ್ತು ವೆಚ್ಚಗಳ ಲೆಕ್ಕವನ್ನು ಸಿದ್ಧಪಡಿಸುವುದು ಹಾಗೂ ಲೆಕ್ಕ ಪರಿಶೋಧನೆಯ ತರುವಾಯ, ಕೂಡಲೇ ತನ್ನ ವರದಿಯ ಪ್ರತಿಯೊಡನೆ,

ಅದನ್ನು ನ್ಯಾಸಧಾರಿಗೆ ಮತ್ತು ಆಯಾ ಪ್ರದೇಶದ ಉಪ ಸಾರ್ವಜನಿಕ ನ್ಯಾಸ ಆಯುಕ್ತರಿಗೆ ಅಥವಾ ಸಾರ್ವಜನಿಕ ನ್ಯಾಸ ಆಯೋಗಕ್ಕೆ, ಅದು ಹಾಗೆ ಮಾಡುವಂತೆ ಅವರಿಗೆ ಅಗತ್ಯಪಡಿಸಿದ್ದರೆ, ಹಾಗೆ ಕಳುಹಿಸಿಕೊಡುವುದು ಅವರ ಕರ್ತವ್ಯವಾಗಿರತಕ್ಕದ್ದು.

(2) ಲೆಕ್ಕಪರಿಶೋಧಕರು ಕಳುಹಿಸಿಕೊಟ್ಟಿದ್ದ ಜಮಾ ಖರ್ಚು ಪಟ್ಟಿಯ ಹಾಗೂ ಆದಾಯ ಮತ್ತು ವೆಚ್ಚಗಳ ಒಂದು ಪ್ರತಿಯನ್ನು, ಆಯಾ ಪ್ರದೇಶದ ಉಪ ಸಾರ್ವಜನಿಕ ನ್ಯಾಸ ಆಯುಕ್ತರ ಅಥವಾ ಸಾರ್ವಜನಿಕ ನ್ಯಾಸ ಆಯೋಗದ ಮುಂದೆ ದಾಖಲು ಮಾಡುವಂತೆ ಉಪ ಸಾರ್ವಜನಿಕ ನ್ಯಾಸ ಆಯುಕ್ತರು ಅಗತ್ಯಪಡಿಸಿದ್ದರೆ ಹಾಗೆ ದಾಖಲು ಮಾಡುವುದು ಸಾರ್ವಜನಿಕ ನ್ಯಾಸದ ನ್ಯಾಸಧಾರಿಯ ಕರ್ತವ್ಯವಾಗಿರತಕ್ಕದ್ದು.

(3) ಲೆಕ್ಕ ಪರಿಶೋಧಕರು, ಅಕ್ರಮಗಳ, ಕಾನೂನುಬಾಹಿರ ಅಥವಾ ಅನುಚಿತ ವೆಚ್ಚ, ಅಥವಾ ಸಾರ್ವಜನಿಕ ನ್ಯಾಸಕ್ಕೆ ಸೇರಿದ ಹಣ ಅಥವಾ ಇತರ ಸ್ವತ್ತನ್ನು ವಸೂಲು ಮಾಡುವಲ್ಲಿ ವಿಫಲತೆಯ ಅಥವಾ ಲೋಪದ ಅಥವಾ ಹಣದ ಅಥವಾ ಅದರ ಇತರ ಸ್ವತ್ತಿನ ನಷ್ಟ ಅಥವಾ ನಿರರ್ಥಕತೆಯ ಎಲ್ಲಾ ಪ್ರಕರಣಗಳನ್ನು ತನ್ನ ವರದಿಯಲ್ಲಿ ನಿರ್ದಿಷ್ಟವಾಗಿ ತಿಳಿಸತಕ್ಕದ್ದು ಮತ್ತು ಅಂಥ ವೆಚ್ಚ, ವಿಫಲತೆ, ಲೋಪ, ಹಾನಿ ಅಥವಾ ನಿರರ್ಥಕತೆಯು, ವಿಶ್ವಾಸ ಭಂಗ ಅಥವಾ ದುರ್ವಿನಿಯೋಗ ಅಥವಾ ನ್ಯಾಸಧಾರಿಗಳ ಅಥವಾ ಯಾವೊಬ್ಬ ಇತರ ವ್ಯಕ್ತಿಯ ಯಾವುದೇ ಇತರ ದುರ್ನಡತೆಯಿಂದಾಗಿ ಉಂಟಾಗಿದೆಯೇ ಎಂಬುದನ್ನು ತಿಳಿಸತಕ್ಕದ್ದು.

**36. ಲೆಕ್ಕ ಪರಿಶೋಧನೆಯಲ್ಲಿ ಬಹಿರಂಗ ಪಡಿಸಲಾದ ನ್ಯೂನತೆಯನ್ನು ಸರಿಪಡಿಸುವುದು.– (1)** ಲೆಕ್ಕ ಪರಿಶೋಧಕರು ತೋರಿಸಿದ ಯಾವುವೇ ನ್ಯೂನತೆಗಳು ಮತ್ತು ಅಕ್ರಮಗಳನ್ನು ಪರಿಹರಿಸುವುದು ಮತ್ತು ಅದನ್ನು ತನ್ನ ವಿವರಣೆಯೊಂದಿಗೆ ಉಪ ಸಾರ್ವಜನಿಕ ನ್ಯಾಸ ಆಯುಕ್ತರಿಗೆ ವರದಿ ಮಾಡುವುದು ಪ್ರತಿಯೊಂದು ಸಾರ್ವಜನಿಕ ನ್ಯಾಸದ ನ್ಯಾಸಧಾರಿಯ ಅಥವಾ ಇತರ ವ್ಯಕ್ತಿಯ ಕರ್ತವ್ಯವಾಗಿರತಕ್ಕದ್ದು. ನ್ಯಾಸಧಾರಿಯು ಯಾವುದಾದರೂ ವಿವರಣೆಯನ್ನು ಒದಗಿಸಿದ್ದರೆ, ಅದರೊಂದಿಗೆ ಲೆಕ್ಕಪರಿಶೋಧಕರ ವರದಿಯನ್ನು ಪರಿಗಣಿಸಿದಾಗ, ಸಾರ್ವಜನಿಕ ನ್ಯಾಸಕ್ಕೆ ನಷ್ಟವಾಗುವ ಹಾಗೆ ನಿರ್ಲಕ್ಷ್ಯ, ವಿಶ್ವಾಸಭಂಗ ಅಥವಾ ದುರ್ವಿನಿಯೋಗ ಅಥವಾ ದುರ್ನಡತೆಯ ತಪ್ಪಿತಸ್ಥನೆಂದು ಕಂಡು ಬಂದರೆ, ಉಪ ಸಾರ್ವಜನಿಕ ನ್ಯಾಸ ಆಯುಕ್ತರು, ನ್ಯಾಸಧಾರಿಗೆ ಆತನ ವಿರುದ್ಧ ಅಕ್ರಮವ್ಯಯವನ್ನು ಭರ್ತಿ ಮಾಡಿಸುವ (ಸರ್‌ಚಾರ್ಜ್) ಆದೇಶವನ್ನು ಏಕೆ ಹೊರಡಿಸಬಾರದೆಂದು ಕಾರಣ ಕೇಳುವ ನೋಟೀಸನ್ನು ನೀಡಬಹುದು ಮತ್ತು ಆತನು ಯಾವುದಾದರೂ ವಿವರಣೆಯನ್ನು ನೀಡಿದರೆ, ಅದನ್ನು ಪರಿಗಣಿಸಿದ ತರುವಾಯ ಮತ್ತು ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ವಿಚಾರಣೆಯನ್ನು ನಡೆಸಿ, ಹಾಗೆ ನಷ್ಟವಾದ ಮೊತ್ತವನ್ನು ಆದೇಶದ ಮೂಲಕ ಪ್ರಮಾಣೀಕರಿಸಿ ಮತ್ತು ನಿರ್ದಿಷ್ಟಪಡಿಸಿದ ಅವಧಿಯೊಳಗೆ, ನ್ಯಾಸಧಾರಿ ಅಥವಾ ಸಂದರ್ಭಾನುಸಾರವಾಗಿ ಅಂಥ ಇತರ ವ್ಯಕ್ತಿಯು, ಸಾರ್ವಜನಿಕ ನ್ಯಾಸಕ್ಕೆ ಉಂಟಾಗಿದ್ದ ನಷ್ಟವನ್ನು ತುಂಬಿಕೊಡುವಂತೆ ನಿರ್ದೇಶಿಸಬಹುದು.

(2) (1)ನೇ ಉಪ ಪ್ರಕರಣದಡಿಯಲ್ಲಿ ಹೊರಡಿಸಲಾದ ಆದೇಶದಿಂದ ಬಾಧಿತನಾದ ನ್ಯಾಸಧಾರಿ ಅಥವಾ ಯಾವೊಬ್ಬ ವ್ಯಕ್ತಿಯು, ಆದೇಶವು ತಲುಪಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ, ಸಾರ್ವಜನಿಕ ನ್ಯಾಸ ಆಯೋಗಕ್ಕೆ ಅಪೀಲು ಮಾಡಬಹುದು.

(3) ಸಾರ್ವಜನಿಕ ನ್ಯಾಸ ಆಯೋಗಕ್ಕೆ ತೃಪ್ತಿಕರವಾಗುವಂತೆ ಸಾಕಷ್ಟು ಭದ್ರತೆಯನ್ನು ಒದಗಿಸದ ಹೊರತು, ಅದು, ಇತ್ಯರ್ಥದಲ್ಲಿರುವ ಅಪೀಲಿನ ಆದೇಶದ ಕಾರ್ಯಾಚರಣೆಯನ್ನು ತಡೆಹಿಡಿಯತಕ್ಕದ್ದಲ್ಲ.

(4) ಯಾವ ನ್ಯಾಸಧಾರಿ ಅಥವಾ ಇತರ ವ್ಯಕ್ತಿಯಿಂದ, ಸರ್‌ಚಾರ್ಜ್ ರೂಪದಲ್ಲಿರುವ ಮೊತ್ತವು ವಸೂಲಾಗಬೇಕಾಗಿದೆಯೊ, ಆತನ ಯಾವುದೇ ಸ್ವತ್ತು ಇರುವ ಜಿಲ್ಲೆಯ ಜಿಲ್ಲಾಧಿಕಾರಿಯು, ನ್ಯಾಸವು ಮಾಡಿದ ಕೋರಿಕೆಯ ಮೇರೆಗೆ, ಭೂ ಕಂದಾಯ ಬಾಕಿಯಂತೆ ಅಂಥ ಮೊತ್ತವನ್ನು ವಸೂಲು ಮಾಡಿ ಅದನ್ನು ಸಂಬಂಧಪಟ್ಟ ಸಾರ್ವಜನಿಕ ನ್ಯಾಸಕ್ಕೆ ಸಂದಾಯ ಮಾಡತಕ್ಕದ್ದು.

## ಅಧ್ಯಾಯ – VI

## ನ್ಯಾಸಧಾರಿಗಳ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ಅವರ ಮೇಲಿನ ನಿರ್ಬಂಧಗಳು

**37. ಸಾರ್ವಜನಿಕ ನ್ಯಾಸದ ಹಣದ ಹೂಡಿಕೆ.–** (1) ನ್ಯಾಸದ ಸ್ವತ್ತು, ಹಣವನ್ನು ಒಳಗೊಂಡಿದ್ದಲ್ಲಿ ಮತ್ತು ಕೂಡಲೇ ಅಥವಾ ಹತ್ತಿರದ ದಿನಗಳಲ್ಲಿ ಅದನ್ನು ಸಾರ್ವಜನಿಕ ನ್ಯಾಸದ ಉದ್ದೇಶಗಳಿಗಾಗಿ ವಿನಿಯೋಗಿಸುವಂತಿಲ್ಲದಿದ್ದಲ್ಲಿ, ನ್ಯಾಸಧಾರಿಯು, ನ್ಯಾಸದ ಲಿಖಿತ ಪತ್ರದಲ್ಲಿ ಯಾವುದೇ ನಿರ್ದೇಶನ ಒಳಗೊಂಡಿದ್ದರೂ, ಭಾರತೀಯ ರಿಸರ್ವ್ ಬ್ಯಾಂಕ್ ಅಧಿನಿಯಮ, 1934 ರಲ್ಲಿ ಪರಿಭಾಷಿಸಿದಂತೆ ಯಾವುದೇ ಅನುಸೂಚಿತ ಬ್ಯಾಂಕಿನಲ್ಲಿ, ಅಂಚೆ ಉಳಿತಾಯ ಬ್ಯಾಂಕಿನಲ್ಲಿ ಅಥವಾ ರಾಜ್ಯಸರ್ಕಾರವು ಅನುಮೋದಿಸಿದ ಸಹಕಾರಿ ಬ್ಯಾಂಕಿನಲ್ಲಿ ಹಣವನ್ನು ಠೇವಣಿ ಇಡುವುದಕ್ಕೆ ಬದ್ಧನಾಗಿರತಕ್ಕದ್ದು.

(2) (1)ನೇ ಉಪ ಪ್ರಕರಣದಲ್ಲಿ ಇರುವುದಾವುದೂ, ಈ ಅಧಿನಿಯಮವು ಜಾರಿಗೆ ಬರುವುದಕ್ಕೆ ಮೊದಲು, ನ್ಯಾಸದ ಲಿಖಿತ ಪತ್ರದಲ್ಲಿ ಒಳಗೊಂಡ ನಿರ್ದೇಶನಕ್ಕನುಸಾರವಾಗಿ ಈಗಾಗಲೇ ಮಾಡಿದ ಯಾವುದೇ ಹೂಡಿಕೆಗೆ ಅಥವಾ ಠೇವಣಿಗೆ ಬಾಧಕವಾಗತಕ್ಕದ್ದಲ್ಲ:

ಪರಂತು, ಸದರಿ ಅಧಿನಿಯಮವು ಜಾರಿಗೆ ಬಂದ ದಿನಾಂಕದಂದು ಅಥವಾ ತರುವಾಯ ಅಂಥ ಹೂಡಿಕೆಯ ಅಥವಾ ಠೇವಣಿಯಿಂದ ಸ್ವೀಕರಿಸಲಾದ ಅಥವಾ ಪ್ರಾಪ್ತವಾದ ಯಾವುದೇ ಬಡ್ಡಿ ಅಥವಾ ಡಿವಿಡೆಂಡ್ ಅಥವಾ ಹಾಗೆ ಹೂಡಿದ ಅಥವಾ ಠೇವಣಿ ಇಟ್ಟ ಯಾವುದೇ ಮೊಬಲಗು, ಸದರಿ ಹೂಡಿಕೆ ಅಥವಾ ಠೇವಣಿಯ ಅವಧಿಯು ಪೂರ್ಣಗೊಂಡಾಗ (1)ನೇ ಉಪ ಪ್ರಕರಣದಲ್ಲಿ ನಿಯಮಿಸಲಾದ ರೀತಿಯಲ್ಲಿ ವಿನಿಯೋಗಿಸತಕ್ಕದ್ದು ಅಥವಾ ಹೂಡತಕ್ಕದ್ದು.

**38. ಸಾರ್ವಜನಿಕ ನ್ಯಾಸದ ಸ್ಥಿರ ಸ್ವತ್ತಿನ ಪರಭಾರೆ.– (1)** ನ್ಯಾಸದ ಲಿಖಿತ ಪತ್ರದಲ್ಲಿ ಒಳಗೊಂಡಿರುವ ಷರತ್ತುಗಳಿಗೆ ಒಳಪಟ್ಟು,–

(ಎ) ಯಾವುದೇ ಸ್ಥಿರ ಸ್ವತ್ತನ್ನು ಮಾರಾಟ, ವಿನಿಮಯ ಅಥವಾ ದಾನ ಮಾಡತಕ್ಕದ್ದಲ್ಲ;

(ಬಿ) ಸಾರ್ವಜನಿಕ ನ್ಯಾಸಕ್ಕೆ ಸೇರಿದ ಖಾಲಿಭೂಮಿ ಅಥವಾ ಕಟ್ಟಡವನ್ನು ಐದು ವರ್ಷಗಳಿಗೆ ಮೀರಿದ ಅವಧಿಗಾಗಿ ಸರ್ಕಾರದ ಪೂರ್ವ ಮಂಜೂರಾತಿ ಇಲ್ಲದೆ ಗುತ್ತಿಗೆಗೆ ನೀಡುವುದು ಸಿಂಧುವಾಗತಕ್ಕದ್ದಲ್ಲ. ನ್ಯಾಸದ ಹಿತಾಸಕ್ತಿ, ಪ್ರಯೋಜನ ಅಥವಾ ರಕ್ಷಣೆಯನ್ನು ಗಮನಿಸಿ ಸರ್ಕಾರವು ಸೂಕ್ತವೆಂದು ಭಾವಿಸಿದ ಷರತ್ತುಗಳನ್ನು ವಿಧಿಸುವುದಕ್ಕೆ ಒಳಪಟ್ಟು ಮಂಜೂರಾತಿಯನ್ನು ನೀಡಬಹುದು; ಮತ್ತು

(ಸಿ) ಯಾವುದೇ ಸಾರ್ವಜನಿಕ ನ್ಯಾಸದ ಹಿತಾಸಕ್ತಿಯಲ್ಲಿ ಅದರ ಯಾವುದೇ ಸ್ಥಿರ ಸ್ವತ್ತನ್ನು ವಿಲೇ ಮಾಡತಕ್ಕದ್ದೆಂದು ಸರ್ಕಾರಕ್ಕೆ ಮನವರಿಕೆಯಾದರೆ, ಅದು, ಅರ್ಜಿಯ ಮೇಲೆ, ನ್ಯಾಸದ ಹಿತಾಸಕ್ತಿ ಅಥವಾ ಪ್ರಯೋಜನ ಅಥವಾ ರಕ್ಷಣೆಯನ್ನು ಗಮನಿಸಿ ಸೂಕ್ತವೆಂದು ಭಾವಿಸಿದ ಷರತ್ತುಗಳನ್ನು ವಿಧಿಸುವುದಕ್ಕೆ ಒಳಪಟ್ಟು, ಅಂಥ ಸ್ವತ್ತಿನ ವಿಲೆಗಾಗಿ ಯಾವೊಬ್ಬ ನ್ಯಾಸಧಾರಿಯನ್ನು ಪ್ರಾಧಿಕರಿಸಬಹುದು.

(2) ಸರ್ಕಾರವು, (1)ನೇ ಉಪಪ್ರಕರಣದ (ಎ) ಖಂಡದ ಅಥವಾ (ಬಿ) ಖಂಡದ ಅಡಿಯಲ್ಲಿ ನೀಡಿದ ಮಂಜೂರಾತಿಯನ್ನು, ಅಂಥ ಮಂಜೂರಾತಿಯನ್ನು ಮೋಸದಿಂದ ಅಥವಾ ತನಗೆ ಸಲ್ಲಿಸಿದ ತಪ್ಪು ನಿರೂಪಣೆಯಿಂದ ಅಥವಾ ಅನ್ಯಥಾ ಸರ್ಕಾರದಿಂದ ಮಂಜೂರಾತಿ ನೀಡುವ ಉದ್ದೇಶಕ್ಕಾಗಿ ಮುಖ್ಯ ವಾಸ್ತವಾಂಶಗಳನ್ನು ಬಚ್ಚಿಡುವ ಮೂಲಕ ಪಡೆದುಕೊಳ್ಳಲಾಗಿದೆಯೆಂಬ ಆಧಾರದ ಮೇಲೆ ರದ್ದುಪಡಿಸಬಹುದು ಮತ್ತು ರದ್ದತಿಯ ದಿನಾಂಕದಿಂದ ಒಂದುನೂರ ಎಂಬತ್ತು ದಿನಗಳ ಅವಧಿಯೊಳಗೆ (ಅಥವಾ ಸರ್ಕಾರವು ಕಾಲಕಾಲಕ್ಕೆ ನಿರ್ಧರಿಸಬಹುದಾದಂತೆ ಒಟ್ಟು ಒಂದು ವರ್ಷಕ್ಕೆ ಮೀರದ ಅಂಥ ಹೆಚ್ಚಿನ ಅವದಿಯೊಳಗೆ) ಸ್ವತ್ತಿನ ವಸೂಲಿಗಾಗಿ, ನಿರ್ದೇಶನದಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಅಂಥ ಕ್ರಮಗಳನ್ನು ಕೈಗೊಳ್ಳುವಂತೆ ನ್ಯಾಸಧಾರಿಗೆ ನಿರ್ದೇಶಿಸಬಹುದು:

ಪರಂತು, ಅಂಥ ಮಂಜೂರಾತಿಯನ್ನು ನೀಡಲಾಗಿರುವ ವ್ಯಕ್ತಿಗೆ, ಮಂಜೂರಾತಿಯನ್ನು ಏಕೆ ರದ್ದುಗೊಳಿಸಕೂಡದೆಂಬ ಬಗ್ಗೆ ಕಾರಣ ತೋರಿಸುವಂತೆ ಸೂಕ್ತ ಅವಕಾಶವನ್ನು ಕೊಟ್ಟ ಹೊರತು, ಯಾವುದೇ ಪೂರ್ವ ಮಂಜೂರಾತಿಯನ್ನು ರದ್ದುಪಡಿಸತಕ್ಕದ್ದಲ್ಲ.

(3) ರಾಜ್ಯ ಸರ್ಕಾರವು, (2)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ನ್ಯಾಸಧಾರಿಯು ಪರಿಣಾಮಕಾರಿಯಾದ ಕ್ರಮವನ್ನು ಕೈಗೊಳ್ಳಲು ವಿಫಲನಾಗಿದ್ದನೆಂದು ಅಥವಾ ಸೂಕ್ತ ಪ್ರಯತ್ನ ಅಥವಾ ವೆಚ್ಚ ಮಾಡಿ ಸ್ವತ್ತನ್ನು ವಸೂಲು ಮಾಡಲು ಸಾಧ್ಯವಾಗುತ್ತಿಲ್ಲವೆಂದು ಅಭಿಪ್ರಾಯಪಟ್ಟರೆ, ನ್ಯಾಸಧಾರಿಯು ಸ್ವೀಕರಿಸಿದ ಯಾವುವೇ ಪ್ರಯೋಜನಗಳ ಮೌಲ್ಯವನ್ನು ಸರ್ಕಾರವು ನಿರ್ಧರಿಸಬಹುದು ಮತ್ತು ಹಾಗೆ ಮೌಲ್ಯ ನಿರ್ಧರಿಸಿದ ಪ್ರಯೋಜನಗಳಿಗೆ ಸಮನಾದ ಪರಿಹಾರವನ್ನು ನ್ಯಾಸಕ್ಕೆ ಸಂದಾಯ ಮಾಡುವಂತೆ ಅವನಿಗೆ ನಿರ್ದೇಶಿಸಬಹುದು.

**39. ನ್ಯಾಸಧಾರಿಗಳ ಅಧಿಕಾರಗಳು, ಕರ್ತವ್ಯಗಳು ಹಾಗೂ ಅವರ ಮೇಲಿನ ನಿರ್ಬಂಧಗಳು.–** (1) ಪ್ರತಿಯೊಂದು ಸಾರ್ವಜನಿಕ ನ್ಯಾಸದ ನ್ಯಾಸಧಾರಿಯು, ನ್ಯಾಸದ ವ್ಯವಹಾರಗಳ ಆಡಳಿತ ನಿರ್ವಹಣೆ ಮಾಡತಕ್ಕದ್ದು ಮತ್ತು ಅದರ ನಿಧಿ ಮತ್ತು ಸ್ವತ್ತುಗಳನ್ನು, ನ್ಯಾಸದ ನಿಬಂಧನೆಗಳಿಗೆ, ಸಂಸ್ಥೆಯ ರೂಢಿ ಮತ್ತು ಅದರ ಸಂಬಂಧದಲ್ಲಿ ಸಾರ್ವಜನಿಕ ನ್ಯಾಸ ಆಯೋಗವು ಅಥವಾ ನ್ಯಾಯಾಲಯವು ನೀಡಬಹುದಾದ ಕಾನೂನುಬದ್ಧ ನಿರ್ದೇಶನಗಳಿಗೆ ಅನುಸಾರವಾಗಿ ನ್ಯಾಸದ ಉದ್ದೇಶ ಮತ್ತು ಧ್ಯೇಯಗಳಿಗಾಗಿ ವಿನಿಯೋಗಿಸತಕ್ಕದ್ದು ಮತ್ತು ಅಂಥ ವ್ಯವಹಾರಗಳನ್ನು, ನಿಧಿಗಳು ಅಥವಾ ಸ್ವತ್ತು ತನ್ನ ಸ್ವಂತದೇ ಆಗಿದ್ದರೆ ಹೇಗೋ ಹಾಗೆ ಅವುಗಳ ಬಗ್ಗೆ ವ್ಯವಹರಿಸುವಾಗ ಸಾಮಾನ್ಯ ವಿವೇಚನೆಯುಳ್ಳ ವ್ಯಕ್ತಿಯು ತೆಗೆದುಕೊಳ್ಳಬಹುದಾದ ಜಾಗರೂಕತೆಯನ್ನು ವಹಿಸತಕ್ಕದ್ದು.

(2) ನ್ಯಾಸಧಾರಿಯು, ಈ ಅಧಿನಿಯಮದ ಉಪಬಂಧಗಳಿಗೆ ಮತ್ತು ನ್ಯಾಸದ ಲಿಖಿತ ಪತ್ರದ ಷರತ್ತುಗಳಿಗೆ ಒಳಪಟ್ಟು, ನ್ಯಾಸದ ವಿವೇಚನಾಯುಕ್ತ ಮತ್ತು ಪ್ರಯೋಜನಕಾರಿ ಆಡಳಿತ ನಿರ್ವಹಣೆಗಾಗಿ ಪ್ರಾಸಂಗಿಕವಾದ ಎಲ್ಲಾ ಅಧಿಕಾರಗಳನ್ನು ಚಲಾಯಿಸಲು ಮತ್ತು ಆತನಿಗೆ ವಿಧಿಸಿದ ಕರ್ತವ್ಯಗಳ ಸೂಕ್ತ ನೆರವೇರಿಕೆಗಾಗಿ ಅವಶ್ಯಕವಾದ ಎಲ್ಲಾ ಕಾರ್ಯಗಳನ್ನು ಮಾಡುವುದಕ್ಕೆ ಹಕ್ಕುಳ್ಳವನಾಗಿರತಕ್ಕದ್ದು.

(3) ಯಾವೊಬ್ಬ ನ್ಯಾಸಧಾರಿಯು, ಸಾರ್ವಜನಿಕ ನ್ಯಾಸ ಆಯೋಗದ ಪೂರ್ವ ಮಂಜೂರಾತಿಯ ಹೊರತು ಮತ್ತು ನ್ಯಾಸದ ಹಿತಾಸಕ್ತಿಯಲ್ಲಿ ಅಥವಾ ರಕ್ಷಣೆಗಾಗಿ, ಅದು ವಿಧಿಸಬಹುದಾದ ಅಂಥ ಷರತ್ತುಗಳು ಮತ್ತು ಪರಿಮಿತಿಗಳಿಗೆ ಒಳಪಟ್ಟು, ಆತನು ನ್ಯಾಸಧಾರಿಯಾಗಿರುವ ನ್ಯಾಸದ ಉದ್ದೇಶಕ್ಕಾಗಿ ಅಥವಾ ಅದರ ಪರವಾಗಿ ಹಣದ ಸಾಲವನ್ನು ಅಡಮಾನದದ ಮೂಲಕವಾಗಿ ಅಥವಾ ಅನ್ಯಥಾ ಪಡೆಯತಕ್ಕದ್ದಲ್ಲ.

(4) ಯಾವೊಬ್ಬ ನ್ಯಾಸಧಾರಿಯು, ಆತನು ನ್ಯಾಸಧಾರಿಯಾಗಿರುವ ಸಾರ್ವಜನಿಕ ನ್ಯಾಸದ ಯಾವುದೇ ಸ್ವತ್ತಿನಿಂದ ತನ್ನ ಸ್ವಂತ ಉಪಯೋಗಕ್ಕಾಗಿ ಯಾವುದೇ ಹಣವನ್ನು ಸಾಲವಾಗಿ ಪಡೆಯತಕ್ಕದ್ದಲ್ಲ.

**40. ಚರ ಮತ್ತು ಸ್ಥಿರ ಸ್ವತ್ತುಗಳ ರಿಜಿಸ್ಟರು.–** (1) ಸಾರ್ವಜನಿಕ ನ್ಯಾಸವು, ಅಂಥ ನ್ಯಾಸದ ಎಲ್ಲಾ ಚರ (ನಿರರ್ಥಕ ಮೌಲ್ಯದ ಸ್ವತ್ತಾಗಿರದ) ಮತ್ತು ಸ್ಥಿರ ಸ್ವತ್ತುಗಳ ರಿಜಿಸ್ಟರನ್ನು, ನಿಯಮಿಸಬಹುದಾದಂತೆ ಎಲ್ಲಾ ಅಂಥ ಮಾಹಿತಿಗಳನ್ನು ನೀಡುವ ನಮೂನೆಯಲ್ಲಿ ತಯಾರಿಸತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು.

(2) ಅಂಥ ರಿಜಿಸ್ಟರಿನಲ್ಲಿ, ನ್ಯಾಸಕ್ಕೆ ಸೇರಿದ ಆಭರಣಗಳ, ಚಿನ್ನದ, ಬೆಳ್ಳಿಯ, ಅಮೂಲ್ಯ ಹರಳುಗಳ, ಪಾತ್ರೆಗಳ ಮತ್ತು ಉಪಕರಣಗಳ ಹಾಗೂ ಎಲ್ಲ ಇತರ ಚರ ಸ್ವತ್ತುಗಳ ವಿವರದೊಡನೆ ಅವುಗಳ ತೂಕ ಮತ್ತು ಅಂದಾಜು ಮೌಲ್ಯವನ್ನು ತೋರಿಸತಕ್ಕದ್ದು.

(3) ಅಂಥ ರಿಜಿಸ್ಟರನ್ನು, ಈ ಅಧಿನಿಯಮದ ಪ್ರಾರಂಭದ ತರುವಾಯದ ಲೆಕ್ಕ ವರ್ಷದ ಮುಕ್ತಾಯದಿಂದ ಮೂರು ತಿಂಗಳೊಳಗೆ ಸಿದ್ಧಪಡಿಸತಕ್ಕದ್ದು.

(4) ಅಂಥ ರಿಜಿಸ್ಟರಿಗೆ, ಅದರ ಸರಿತನದ ಬಗ್ಗೆ ಸತ್ಯಾಪನೆ ಮಾಡಿಕೊಂಡ ತರುವಾಯ, ಎಲ್ಲಾ ನ್ಯಾಸಧಾರಿಗಳು ಅಥವಾ ನ್ಯಾಸಧಾರಿಗಳು ವಿಧ್ಯುಕ್ತವಾಗಿ ಪ್ರಾಧಿಕರಿಸಿದ ಯಾವೊಬ್ಬ ವ್ಯಕ್ತಿಯು, ಸಹಿ ಮಾಡತಕ್ಕದ್ದು ಮತ್ತು ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಲೆಕ್ಕ ಪರಿಶೋಧನೆಗೆ ಅಗತ್ಯಪಡಿಸಲಾದ ಲೆಕ್ಕಗಳು ಆಗಿದ್ದರೆ, ಲೆಕ್ಕ ಪರಿಶೋಧನೆಯ ಉದ್ದೇಶಕ್ಕಾಗಿ ಲೆಕ್ಕ ಪರಿಶೋಧಕರಿಗೆ ಲಭ್ಯವಾಗುವಂತೆ ಮಾಡತಕ್ಕದ್ದು. ಲೆಕ್ಕಗಳನ್ನು ಲೆಕ್ಕಪರಿಶೋಧನೆಗಾಗಿ ಅಗತ್ಯಪಡಿಸಲಾಗಿರದಿದ್ದರೆ, ನ್ಯಾಸಧಾರಿಗಳು ವಿಧ್ಯುಕ್ತವಾಗಿ ಸಹಿ ಮಾಡಿ ಸತ್ಯಾಪನೆ ಮಾಡಿದ ಅಂಥ ರಿಜಿಸ್ಟರಿನ ಒಂದು ಪ್ರತಿಯನ್ನು ಜಿಲ್ಲೆಯ ಉಪ ಸಾರ್ವಜನಿಕ ನ್ಯಾಸ ಆಯುಕ್ತರಲ್ಲಿ ದಾಖಲ್ಮಾತಕ್ಕದ್ದು.

(5) ಪ್ರತಿವರ್ಷ, ಲೆಕ್ಕಗಳನ್ನು ತಾಳೆಮಾಡಿದ ದಿನಾಂಕದಿಂದ ಮೂರು ತಿಂಗಳೊಳಗೆ ನ್ಯಾಸಧಾರಿಯು ಅಥವಾ ಆತನು ಪ್ರಾಧಿಕರಿಸಿದ ಯಾವೊಬ್ಬ ವ್ಯಕ್ತಿಯು, ಅಂಥ ರಿಜಿಸ್ಟರನ್ನು ಪರಿಶೀಲಿಸತಕ್ಕದ್ದು ಮತ್ತು ಅದರಲ್ಲಿ ಮಾಡಿದ ಬದಲಾವಣೆಗಳನ್ನು, ಬಿಟ್ಟುಬಿಡುವಿಕೆ ಮತ್ತು ಸೇರ್ಪಡೆಗಳನ್ನು ತೋರಿಸಿ ಅದನ್ನು ಇಂದೀಕರಿಸತಕ್ಕದ್ದು ಮತ್ತು ಅಂಥ ಬದಲಾವಣೆಗಳನ್ನು, 21ನೇ ಪ್ರಕರಣದಲ್ಲಿ ಉಪಬಂಧಿಸಿದ ರೀತಿಯಲ್ಲಿ ಉಪ ಸಾರ್ವಜನಿಕ ನ್ಯಾಸ ಆಯುಕ್ತರಿಗೆ ವರದಿ ಮಾಡತಕ್ಕದ್ದು.

## ಅಧ್ಯಾಯ – VII

## ನಿಯಂತ್ರಣ

**41. ಪರಿಶೀಲನೆ ಮತ್ತು ಮೇಲ್ವಿಚಾರಣೆ ಅಧಿಕಾರ.–** (1) ಸಾರ್ವಜನಿಕ ನ್ಯಾಸ ಆಯೋಗವು, ಪ್ರದೇಶ ಮಟ್ಟದಲ್ಲಿ ಉಪ ಸಾರ್ವಜನಿಕ ನ್ಯಾಸ ಆಯುಕ್ತರ ಮೇಲೆ ಆಡಳಿತ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

(2) ಸಾರ್ವಜನಿಕ ನ್ಯಾಸ ಆಯೋಗ, ಉಪ ಸಾರ್ವಜನಿಕ ನ್ಯಾಸ ಆಯುಕ್ತ ಅಥವಾ ರಾಜ್ಯ ಸರ್ಕಾರವು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಪ್ರಾಧಿಕಾರಿಸಿದ ಯಾವೊಬ್ಬ ಅಧಿಕಾರಿಯು,–

(ಎ) ಸಾರ್ವಜನಿಕ ನ್ಯಾಸಕ್ಕೆ ಸೇರಿದ ಯಾವುದೇ ಸ್ವತ್ತಿನಲ್ಲಿ ಪ್ರವೇಶಿಸಲು ಮತ್ತು ಪರಿಶೀಲಿಸಲು ಅಥವಾ ಪ್ರವೇಶಿಸುವಂತೆ ಮಾಡಲು ಮತ್ತು ಪರಿಶೀಲಿಸಲು;

(ಬಿ) ಯಾವುದೇ ಸಾರ್ವಜನಿಕ ನ್ಯಾಸದ ನ್ಯಾಸಧಾರಿಗಳ ಯಾವುವೇ ನಡೆವಳಿಗಳನ್ನು ಮತ್ತು ನ್ಯಾಸಧಾರಿಗಳ ಅಥವಾ ನ್ಯಾಸಕ್ಕೆ ಸಂಬಂಧಿಸಿದ ಯಾವೊಬ್ಬ ವ್ಯಕ್ತಿಯ ಸ್ವಾಧೀನತೆಯಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುವೇ ಲೆಕ್ಕ ಪತ್ರಗಳ ಪುಸ್ತಕವನ್ನು ಅಥವಾ ದಸ್ತಾವೇಜುಗಳನ್ನು ತರಿಸಿಕೊಳ್ಳಲು ಮತ್ತು ಪರಿಶೀಲಿಸಲು;

(ಸಿ) ನ್ಯಾಸಧಾರಿಯಿಂದ ಅಥವಾ ಸಾರ್ವಜನಿಕ ನ್ಯಾಸಕ್ಕೆ ಸಂಬಂಧಪಟ್ಟ ಯಾವೊಬ್ಬ ವ್ಯಕ್ತಿಯಿಂದ ತಾನು ಸೂಕ್ತವೆಂದು ಭಾವಿಸಬಹುದಾದ ಯಾವುದೇ ವಿವರಣ ಪಟ್ಟಿ, ತಖ್ತೆ:, ಲೆಕ್ಕಪತ್ರ ಅಥವಾ ವರದಿಯನ್ನು ತರಿಸಿಕೊಳ್ಳಲು;

(ಡಿ) ನ್ಯಾಸಧಾರಿಯ ಅಥವಾ ಸಾರ್ವಜನಿಕ ನ್ಯಾಸಕ್ಕೆ ಸಂಬಂಧಪಟ್ಟ ಯಾವೊಬ್ಬ ವ್ಯಕ್ತಿಯಿಂದ ವಿವರಣೆಯನ್ನು ಪಡೆದುಕೊಳ್ಳಲು ಮತ್ತು ಆತನು ನೀಡಿದ ಯಾವುದೇ ಹೇಳಿಕೆಯನ್ನು ಲಿಖಿತವಾಗಿ ದಾಖಲು ಮಾಡಲು ಅಥವಾ ದಾಖಲು ಮಾಡುವಂತೆ ಮಾಡಲು,

–ಅಧಿಕಾರವನ್ನು ಹೊಂದಿರತಕ್ಕದ್ದು:

ಪರಂತು, ಸಾರ್ವಜನಿಕ ನ್ಯಾಸಕ್ಕೆ ಸೇರಿದ ಯಾವುದೇ ಸ್ವತ್ತಿನಲ್ಲಿ ಪ್ರವೇಶಿಸುವ ಅಧಿಕಾರಿಗಳು ನ್ಯಾಸಧಾರಿಗಳಿಗೆ ಸೂಕ್ತ ನೋಟಿಸನ್ನು ಕೊಡತಕ್ಕದ್ದು.

(3) (1)ನೇ ಉಪಪ್ರಕರಣದ ಅಡಿಯಲ್ಲಿ ಯಾವುವೇ ಅಧಿಕಾರವನ್ನು ಚಲಾಯಿಸುವ ಯಾವೊಬ್ಬ ಅಧಿಕಾರಿಗೆ ಸೂಕ್ತ ಸೌಲಭ್ಯಗಳನ್ನು ಒದಗಿಸುವುದು ಪ್ರತಿಯೊಬ್ಬ ನ್ಯಾಸಧಾರಿಯ ಕರ್ತವ್ಯವಾಗಿರತಕ್ಕದ್ದು ಮತ್ತು (1)ನೇ ಉಪಪ್ರಕರಣದ ಮೂಲಕ ಅಥವಾ ಅದರ ಅಡಿಯಲ್ಲಿ ಆತನಿಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುವುದರಲ್ಲಿ ಅಂಥ ಅಧಿಕಾರಿಯು ಮಾಡಿದ ಯಾವುದೇ ಆದೇಶವನ್ನು ಅಥವಾ ನೀಡಿದ ನಿರ್ದೇಶನವನ್ನು ಪಾಲಿಸುವುದು, ನ್ಯಾಸಧಾರಿಗಳ ಅಥವಾ ಸಾರ್ವಜನಿಕ ನ್ಯಾಸಕ್ಕೆ ಸಂಬಂಧಪಟ್ಟ ಯಾವೊಬ್ಬ ವ್ಯಕ್ತಿಯ ಕರ್ತವ್ಯವಾಗಿರತಕ್ಕದ್ದು.

(4) ಈ ಪ್ರಕರಣದ ಅಡಿಯಲ್ಲಿ ಸಾರ್ವಜನಿಕ ನ್ಯಾಸದ ವ್ಯವಹಾರಗಳ ಪರಿಶೀಲನೆ ಮಾಡಿದ ತರುವಾಯ, ನ್ಯಾಸಧಾರಿಯ ಅಥವಾ ನ್ಯಾಸಕ್ಕೆ ಸಂಬಂಧಪಟ್ಟ ಯಾವೊಬ್ಬ ವ್ಯಕ್ತಿಯ ಒಟ್ಟಾರೆ ಉಪೇಕ್ಷೆ, ವಿಶ್ವಾಸಭಂಗ, ದುರ್ವಿನಿಯೋಗ ಅಥವಾ ದುರ್ನಡತೆಯಿಂದಾಗಿ ಸಾರ್ವಜನಿಕ ನ್ಯಾಸಕ್ಕೆ ಹಾನಿಯುಂಟಾಗಿದೆಯೆಂದು ಉಪ ಸಾರ್ವಜನಿಕ ನ್ಯಾಸ ಆಯುಕ್ತರ ಅಥವಾ (1)ನೇ ಉಪಪ್ರಕರಣದ ಅಡಿಯಲ್ಲಿ ಪ್ರಾಧಿಕೃತನಾದ ಅಧಿಕಾರಿಯ ಗಮನಕ್ಕೆ ಬಂದರೆ, ಅಥವಾ ತಾನಾಗಿಯೇ ಉಪ ಸಾರ್ವಜನಿಕ ನ್ಯಾಸ ಆಯುಕ್ತರು ಅದರ ವರದಿಯನ್ನು ಸಾರ್ವಜನಿಕ ನ್ಯಾಸ ಆಯೋಗಕ್ಕೆ; ಮತ್ತು ಹಾಗೇ ಪ್ರಾಧಿಕೃತನಾದ ಅಧಿಕಾರಿಯು ಉಪ ಸಾರ್ವಜನಿಕ ನ್ಯಾಸ ಆಯುಕ್ತರಿಗೆ ಸಲ್ಲಿಸತಕ್ಕದ್ದು.

**42. ಲೆಕ್ಕ ಪರಿಶೋಧಕನ ವರದಿಯ ಮೇಲೆ ಅಥವಾ ಫಿರ್ಯಾದಿನ ಮೇಲೆ ವಿವರಣೆ.–** 35ನೇ ಪ್ರಕರಣದ ಅಡಿಯಲ್ಲಿ ಲೆಕ್ಕ ಪರಿಶೋಧಕರ ವರದಿಯನ್ನು ಅಥವಾ 41ನೇ ಪ್ರಕರಣದ ಅಡಿಯಲ್ಲಿ ಪ್ರಾಧಿಕೃತನಾದ ಅಧಿಕಾರಿಯು ಯಾವುದೇ ವರದಿಯನ್ನು ಸಲ್ಲಿಸಿದ್ದರೆ, ಅದನ್ನು ಸ್ವೀಕರಿಸಿದ ಮೇಲೆ ಅಥವಾ ಯಾವುದೇ ನ್ಯಾಸದ ಸಂಬಂಧದಲ್ಲಿ ಫಿರ್ಯಾದನ್ನು ಸ್ವೀಕರಿಸಿದ ಮೇಲೆ, ವರದಿಯನ್ನು ಯಾರಿಗೆ ಸಲ್ಲಿಸಲಾಗಿದೆಯೋ ಅಥವಾ ಫಿರ್ಯಾದನ್ನು ಮಾಡಲಾಗಿದೆಯೋ ಆ ಉಪ ಸಾರ್ವಜನಿಕ ನ್ಯಾಸ ಆಯುಕ್ತರು ತಾನು ಸೂಕ್ತವೆಂದು ಭಾವಿಸುವ ಅವಧಿಯೊಳಗೆ ವಿವರಣೆಯನ್ನು ಸಲ್ಲಿಸಲು ನ್ಯಾಸಧಾರಿಯನ್ನು ಅಥವಾ ಸಂಬಂಧಪಟ್ಟ ಇತರ ಯಾವೊಬ್ಬ ವ್ಯಕ್ತಿಯನ್ನು ಅಗತ್ಯಪಡಿಸತಕ್ಕದ್ದು.

**43. ಸಾರ್ವಜನಿಕ ನ್ಯಾಸ ಆಯೋಗಕ್ಕೆ ವರದಿ.–** 42ನೇ ಪ್ರಕರಣದಲ್ಲಿ ಉಲ್ಲೇಖಿಸಿದ ವರದಿಯನ್ನು, ನ್ಯಾಸಧಾರಿಗಳು ಮತ್ತು ಸಾರ್ವಜನಿಕ ನ್ಯಾಸಕ್ಕೆ ಸಂಬಂಧಪಟ್ಟ ಯಾವೊಬ್ಬ ವ್ಯಕ್ತಿಯು ಒದಗಿಸಿದ ಲೆಕ್ಕ ಪತ್ರಗಳು ಮತ್ತು ವಿವರವನ್ನು ಪರಿಗಣಿಸಿದ ಮೇಲೆ ಮತ್ತು ನಿಯಮಿಸಲಾದ ರೀತಿಯಲ್ಲಿ ವಿಚಾರಣೆಯನ್ನು ನಡೆಸಿದ ತರುವಾಯ, ನ್ಯಾಸಧಾರಿಯು ಅಥವಾ ನ್ಯಾಸಕ್ಕೆ ಸಂಬಂಧಪಟ್ಟ ವ್ಯಕ್ತಿಯು, ನ್ಯಾಸಕ್ಕೆ ಹಾನಿ ಉಂಟಾಗುವಂತೆ ಒಟ್ಟಾರೆ ಉಪೇಕ್ಷೆ, ವಿಶ್ವಾಸಭಂಗ, ದುರ್ವಿನಿಯೋಗ ಅಥವಾ ದುರ್ನಡತೆಗಾಗಿ ತಪ್ಪಿತಸ್ಥನಾಗಿರುವನೇ ಅಥವಾ ಇಲ್ಲವೇ ಎಂಬ ಪ್ರಶ್ನೆಯ ಮೇಲೆ ಉಪ ಸಾರ್ವಜನಿಕ ನ್ಯಾಸ ಆಯುಕ್ತರು ತಮ್ಮ ತೀರ್ಮಾನಗಳನ್ನು ದಾಖಲಿಸತಕ್ಕದ್ದು ಮತ್ತು ಅದರ ಒಂದು ವರದಿಯನ್ನು ಸಾರ್ವಜನಿಕ ನ್ಯಾಸ ಆಯೋಗಕ್ಕೆ ನೀಡತಕ್ಕದ್ದು.

**44. 43ನೇ ಪ್ರಕರಣದಡಿಯಲ್ಲಿ ಸ್ವೀಕರಿಸಿದ ವರದಿಯ ಮೇಲೆ ಆದೇಶ ನೀಡಲು ಅಥವಾ ವಿಷಯ ಮುಂತಾದವುಗಳನ್ನು ಹಿಂದಕ್ಕೆ ಕಳುಹಿಸಲು ಸಾರ್ವಜನಿಕ ನ್ಯಾಸ ಆಯೋಗದ ಅಧಿಕಾರ.–** ಸಾರ್ವಜನಿಕ ನ್ಯಾಸ ಆಯೋಗವು, ಉಪ ಸಾರ್ವಜನಿಕ ನ್ಯಾಸ ಆಯುಕ್ತನ ವರದಿಯನ್ನು ಪರಿಗಣಿಸಿದ ಮೇಲೆ ಮತ್ತು ಸಂಬಂಧಪಟ್ಟ ವ್ಯಕ್ತಿಗೆ ಅವಕಾಶವನ್ನು ನೀಡಿ ತಾನು ಸೂಕ್ತವೆಂದು ಭಾವಿಸಬಹುದಾದಂಥ ವಿಚಾರಣೆ ನಡೆಸಿ,–

(1) (ಎ) ಸಾರ್ವಜನಿಕ ನ್ಯಾಸಕ್ಕೆ ಉಂಟಾದ ಹಾನಿಯ ಮೊತ್ತವನ್ನು,

(ಬಿ) ಯಾವೊಬ್ಬ ವ್ಯಕ್ತಿಯ ಒಟ್ಟಾರೆ ಉಪೇಕ್ಷೆ, ವಿಶ್ವಾಸಭಂಗ, ದುರ್ವಿನಿಯೋಗ ಅಥವಾ ದುರ್ನಡತೆಯಿಂದಾಗಿ ಅಂಥ ಹಾನಿಯಾಗಿದೆಯೇ ಎಂಬುದನ್ನು;

(ಸಿ) ನ್ಯಾಸಧಾರಿಗಳ ಪೈಕಿ ಯಾರೊಬ್ಬರು ಅಥವಾ ಸಾರ್ವಜನಿಕ ನ್ಯಾಸಕ್ಕೆ ಸಂಬಂಧಪಟ್ಟ ಯಾವೊಬ್ಬ ವ್ಯಕ್ತಿಯು ಅಂಥ ಹಾನಿಗೆ ಹೊಣೆಗಾರನಾಗಿರುವನೇ ಎಂಬುದನ್ನು;

(ಡಿ) ಅಂಥ ಹಾನಿಗಾಗಿ ನ್ಯಾಸಧಾರಿಗಳ ಪೈಕಿ ಯಾರೊಬ್ಬರು ಅಥವಾ ಸಾರ್ವಜನಿಕ ನ್ಯಾಸಕ್ಕೆ ಸಂಬಂಧಪಟ್ಟ ಯಾವೊಬ್ಬ ವ್ಯಕ್ತಿಯು ಸಾರ್ವಜನಿಕ ನ್ಯಾಸಕ್ಕೆ ಸಂದಾಯ ಮಾಡಲು ಬದ್ಧನಾದ ಮೊತ್ತವನ್ನು,

– ನಿರ್ಧರಿಸಬಹುದು.

(2) ಹೆಚ್ಚಿನ ವಿಚಾರಣೆಗಾಗಿ ವರದಿಯನ್ನು ಮಾಡಿದ ಅಧಿಕಾರಿಗೆ ಅಥವಾ ತಾನು ಸೂಕ್ತವೆಂದು ಭಾವಿಸುವಂಥ ಯಾವೊಬ್ಬ ಇತರ ಅಧಿಕಾರಿಗೆ ಅಥವಾ ಕಾರಣಗಳನ್ನು ಲಿಖಿತವಾಗಿ ದಾಖಲಿಸುವುದಕ್ಕಾಗಿ, ವಿಷಯವನ್ನು ಹಿಂದಕ್ಕೆ ಕಳುಹಿಸಬಹುದು.

**45. ಸರ್‌ಚಾರ್ಜಿನ ಆದೇಶ.–** (1) ಸಾರ್ವಜನಿಕ ನ್ಯಾಸ ಆಯೋಗವು, ನ್ಯಾಸಕ್ಕೆ ಸಂಬಂಧಪಟ್ಟ ಯಾವೊಬ್ಬ ವ್ಯಕ್ತಿಯು, ನ್ಯಾಸಕ್ಕೆ ಉಂಟಾದ ಹಾನಿಗಾಗಿ ಒಂದು ಮೊಬಲಗನ್ನು ನ್ಯಾಸಕ್ಕೆ ಸಂದಾಯಮಾಡಲು ಬದ್ಧನಾಗಿದ್ದಾನೆಂದು ನಿರ್ಧರಿಸಿದರೆ, ಆ ವ್ಯಕ್ತಿಯ ಮೇಲೆ ಆ ಮೊಬಲಗನ್ನು ಸರ್‌ಚಾರ್ಜ್ ಆಗಿ ವಿಧಿಸತಕ್ಕದೆಂದು ಸಾರ್ವಜನಿಕ ನ್ಯಾಸ ಆಯೋಗವು ನಿರ್ದೇಶಿಸಬಹುದು.

(2) 67ನೇ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, (1)ನೇ ಉಪಪ್ರಕರಣದ ಅಡಿಯಲ್ಲಿ ಸಾರ್ವಜನಿಕ ನ್ಯಾಸ ಆಯೋಗದ ಆದೇಶವು ಅಂತಿಮ ಮತ್ತು ನಿರ್ಣಾಯಕವಾಗಿರತಕ್ಕದ್ದು.

**46. ನ್ಯಾಸದ ಸೂಕ್ತ ಆಡಳಿತಕ್ಕಾಗಿ ನಿರ್ದೇಶನಗಳನ್ನು ನೀಡಲು ಸಾರ್ವಜನಿಕ ನ್ಯಾಸ ಆಯೋಗದ ಅಧಿಕಾರ.–** (1) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಸಾರ್ವಜನಿಕ ನ್ಯಾಸ ಆಯೋಗವು ಕಾಲಕಾಲಕ್ಕೆ,

(i) ಸಾರ್ವಜನಿಕ ನ್ಯಾಸದ ಯಾವೊಬ್ಬ ನ್ಯಾಸಧಾರಿಗೆ ಅಥವಾ ಅದಕ್ಕೆ ಸಂಬಂಧಪಟ್ಟ ಯಾವೊಬ್ಬ ವ್ಯಕ್ತಿಗೆ ನ್ಯಾಸದ ಸೂಕ್ತ ಆಡಳಿತ ನಿರ್ವಹಣೆಯನ್ನು ಮತ್ತು ಅದರ ಆದಾಯದ ಸೂಕ್ತ ಲೆಕ್ಕ ಇಡುವುದನ್ನು ಅಥವಾ ಅದನ್ನು ನ್ಯಾಸದ ಧ್ಯೇಯಗಳು ಹಾಗು ಉದ್ದೇಶಗಳಿಗಾಗಿ ಸೂಕ್ತವಾಗಿ ವಿನಿಯೋಗಿಸುವುದನ್ನು ಮತ್ತು ಬಳಸುವುದನ್ನು ಖಚಿತಪಡಿಸಿಕೊಳ್ಳುವುದಕ್ಕಾಗಿ;

(ii) ನ್ಯಾಸಧಾರಿಗಳಿಗೆ ಅಥವಾ ಅಂಥ ವ್ಯಕ್ತಿಗೆ ನ್ಯಾಸದ ಸ್ವತ್ತು ಪೋಲಾಗುವ, ಹಾನಿಯಾಗುವ ಪರಭಾರೆಯಾಗುವ ಅಥವಾ ಅಕ್ರಮವಾಗಿ ಮಾರಾಟವಾಗುವ, ಸಾಗಿಸಲಾಗುವ ಅಥವಾ ವಿಲೆಯಾಗುವ ಅಪಾಯದಲ್ಲಿ ಇದೆಯೆಂದು ಕಂಡುಬಂದರೆ,

– ನಿರ್ದೇಶನಗಳನ್ನು ನೀಡಬಹುದು

(2) (1)ನೇ ಉಪ ಪ್ರಕರಣದಡಿಯಲ್ಲಿ ನೀಡಿದ ನಿರ್ದೇಶನಗಳನ್ನು ಪಾಲಿಸುವುದು ಪ್ರತಿಯೊಬ್ಬ ನ್ಯಾಸಧಾರಿಯ ಅಥವಾ ಅಂಥ ವ್ಯಕ್ತಿಯ ಕರ್ತವ್ಯವಾಗಿರತಕ್ಕದ್ದು.

**47. ಅತ್ಯಂತ ಬಡ ರೋಗಿಗಳಿಗೆ ಉಚಿತವಾಗಿ ಅಥವಾ ರಿಯಾಯಿತಿ ದರದಲ್ಲಿ ಚಿಕಿತ್ಸೆ ನೀಡುವುದಕ್ಕಾಗಿ ಆಸ್ಪತ್ರೆ ಮುಂತಾದವುಗಳಲ್ಲಿ ಕೆಲವು ಹಾಸಿಗೆಗಳು ಮುಂತಾದವುಗಳನ್ನು ಕಾಯ್ದಿರಿಸುವುದಕ್ಕಾಗಿ ಸಾರ್ವಜನಿಕ ನ್ಯಾಸ ಆಯೋಗದ ಮತ್ತು ರಾಜ್ಯಸರ್ಕಾರದ ಅಧಿಕಾರ.–**(1)ತತ್ಕಾಲದಲ್ಲಿ ಜಾರಿಯಲ್ಲಿ ಇರುವ ಯಾವುದೇ ಕಾನೂನಿನಲ್ಲಿ ಅಥವಾ ನ್ಯಾಸದ ಯಾವುದೇ ಲಿಖಿತ ಪತ್ರದಲ್ಲಿ ಅಥವಾ ಯಾವುದೇ ಕರಾರಿನಲ್ಲಿ ಅಥವಾ ಯಾವುದೇ ನ್ಯಾಯಾಲಯದ, ನ್ಯಾಯಾಧಿಕರಣದ, ಅಥವಾ ಇತರ ಯಾವುದೇ ಸಕ್ಷಮ ಪ್ರಾಧಿಕಾರದ ಯಾವುದೇ ತೀರ್ಪು, ಡಿಕ್ರಿ ಅಥವಾ ಆದೇಶದಲ್ಲಿ ಏನೇ ಒಳಗೊಂಡಿದ್ದರೂ, ಯಾರ ವಾರ್ಷಿಕ ವೆಚ್ಚವು ಐದು ಲಕ್ಷ ರೂಪಾಯಿಗಳನ್ನು ಮೀರುವ ಅಥವಾ ರಾಜ್ಯಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಕಾಲಕಾಲಕ್ಕೆ ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಇತರ ಮಿತಿಯನ್ನು ಮೀರುವ ವಾರ್ಷಿಕ ವೆಚ್ಚವನ್ನುಳ್ಳ, ರಾಜ್ಯ ಅನುದಾನಿತ ಸಾರ್ವಜನಿಕ ನ್ಯಾಸದ ಸಂಬಂಧದಲ್ಲಿ ಅತ್ಯಂತ ಬಡ ವರ್ಗದ ಜನರಿಗೆ, ಅತ್ಯಾವಶ್ಯಕ ವೈದ್ಯಕೀಯ ಸೌಲಭ್ಯಗಳು ಉಚಿತವಾಗಿ ಅಥವಾ ರಿಯಾಯಿತಿ ದರದಲ್ಲಿ ಲಭ್ಯವಾಗುವಂತೆ ಮಾಡುವ ದೃಷ್ಟಿಯಿಂದ, ರಾಜ್ಯ ಸರ್ಕಾರವು ಈ ಸಂಬಂಧದಲ್ಲಿ ಕಾಲಕಾಲಕ್ಕೆ ನೀಡಬಹುದಾದ ಅಂಥ ಸಾಮಾನ್ಯ ಅಥವಾ ವಿಶೇಷ ಆದೇಶಗಳಿಗೆ ಒಳಪಟ್ಟು ಮುಂದಿನ ಎಲ್ಲಾ ಅಥವಾ ಆಸ್ಪತ್ರೆಯನ್ನು (ಯಾವುದೇ ನರ್ಸಿಂಗ್ ಹೋಂ ಅಥವಾ ಪ್ರಸೂತಿ ಗೃಹಗಳು ಒಳಗೊಂಡಂತೆ) ಔಷಧಾಲಯ ಅಥವಾ ವೈದ್ಯಕೀಯ ಪರಿಹಾರಕ್ಕಾಗಿನ ಯಾವುದೇ ಇತರ ಕೇಂದ್ರವನ್ನು (ಈ ಪ್ರಕರಣದಲ್ಲಿ "ವೈದ್ಯಕೀಯ ಕೇಂದ್ರ" ಎಂದು ಉಲ್ಲೇಖಿಸಲಾಗಿದೆ) ನಿರ್ವಹಿಸುತ್ತಿರುವ ಯಾವುದೇ ಅಂಥ ನ್ಯಾಸದ ನ್ಯಾಸಧಾರಿಗಳಿಗೆ ಅಥವಾ ಸಂಬಂಧಪಟ್ಟ ವ್ಯಕ್ತಿಗಳಿಗೆ ಸಾರ್ವಜನಿಕ ನ್ಯಾಸ ಆಯೋಗವು ಈ ಮುಂದಿನ ಎಲ್ಲ ಅಥವಾ ಯಾವುವೇ ನಿರ್ದೇಶನಗಳನ್ನು, ನೀಡುವುದು ಕಾನೂನುಬದ್ಧವಾಗಿರತಕ್ಕದ್ದು, ಎಂದರೆ:–

(ಎ) ಲಭ್ಯವಿರುವ ಸ್ಥಳಾವಕಾಶ ಮತ್ತು ಸೌಲಭ್ಯಗಳನ್ನು ಗಮನಿಸಿ ಯಾವುದೇ ಧರ್ಮ, ಜನಾಂಗ, ಜಾತಿ, ಲಿಂಗ, ಜನ್ಮಸ್ಥಳ, ಭಾಷೆ ಅಥವಾ ಅವುಗಳಲ್ಲಿ ಯಾವುದೊಂದರ ಆಧಾರದ ಮೇಲೆ ಯಾವುದೇ ತಾರತಮ್ಯವನ್ನು ಮಾಡದೆ ಯಾವೊಬ್ಬ ವ್ಯಕ್ತಿಗೆ ವೈದ್ಯಕೀಯ ಕೇಂದ್ರಕ್ಕೆ ಪ್ರವೇಶ ನೀಡುವುದು ಮುಕ್ತವಾಗಿರುವುದು:

ಪರಂತು, ವೈದ್ಯಕೀಯ ಕೇಂದ್ರವು ಮಹಿಳೆಯರಿಗಾಗಿ ಇದ್ದಲ್ಲಿ ಅಂಥ ಕೇಂದ್ರದಲ್ಲಿ ಪುರುಷರಿಗಾಗಿ ಚಿಕಿತ್ಸೆ ನೀಡುವಂತೆ ಒತ್ತಾಯಿಸತಕ್ಕದ್ದಲ್ಲ.

(ಬಿ) ದಾಖಲಾಗಲು ಅಥವಾ ಚಿಕಿತ್ಸೆ ಪಡೆಯಲು ಇಚ್ಛಿಸುವ ನಿರ್ಗತಿಕ ರೋಗಿಗಳ ಉಚಿತ ವೈದ್ಯಕೀಯ ಪರೀಕ್ಷೆ, ಚಿಕಿತ್ಸೆ ಮತ್ತು ಸಂದರ್ಭಾನುಸಾರವಾಗಿ ದಾಖಲಾತಿಯಾಗಬೇಕೆಂದು ಬಯಸುವ ಅಂಥ ರೋಗಿಗಳಿಗಾಗಿ, ನಿರ್ದೇಶನಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ರೀತಿಯಲ್ಲಿ, ವೈದ್ಯಕೀಯ ಕೇಂದ್ರದ ಪ್ರತಿಯೊಂದು ವಿಭಾಗದಲ್ಲಿ ವೈದ್ಯಕೀಯ ಪರೀಕ್ಷೆ ಹಾಗು ಚಿಕಿತ್ಸೆಗಾಗಿ ಅಂಥ ವೈದ್ಯಕೀಯ ಕೇಂದ್ರದಲ್ಲಿ ಶಸ್ತ್ರಚಿಕಿತ್ಸೆಗಾಗಿ ಒದಗಿಸಿರುವ ಹಾಸಿಗೆಗಳ ಒಟ್ಟು ಸಂಖ್ಯೆಯ ಶೇಕಡಾ ಹತ್ತರಷ್ಟನ್ನು ಮತ್ತು ಚಿಕಿತ್ಸೆ ನೀಡಲಾಗುವ ಒಟ್ಟು ರೋಗಿಗಳ ಸಂಖ್ಯೆಯ ಶೇಕಡಾ ಹತ್ತರಷ್ಟನ್ನು, ಮೀಸಲಿರಿಸುವುದು ಹಾಗು ಕಾಯ್ದಿರಿಸುವುದು;

(ಸಿ) ರಾಜ್ಯ ಸರ್ಕಾರವು ನಿರ್ವಹಿಸುತ್ತಿರುವ ವೈದ್ಯಕೀಯ ಕೇಂದ್ರಗಳಲ್ಲಿ ಅದು ವಿಧಿಸುತ್ತಿರುವ ದರಗಳನ್ನು ಗಮನಿಸಿ ಕಾಲಕಾಲಕ್ಕೆ, ರಾಜ್ಯಸರ್ಕಾರವು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ನಿರ್ಧರಿಸಬಹುದಾದಂಥ ದರಗಳಿಗೆ ಅನುಸಾರವಾಗಿ ಶುಲ್ಕವನ್ನು ವಿಧಿಸುವುದಕ್ಕೆ ಒಳಗಾಗತಕ್ಕಂಥ, ವೈದ್ಯಕೀಯ ಪರೀಕ್ಷೆ ಅಥವಾ ಚಿಕಿತ್ಸೆ ಪಡೆಯಲು ದಾಖಲಾಗುವುದಕ್ಕೆ ಇಚ್ಛಿಸುವ ದುರ್ಬಲ ವರ್ಗಗಳ ರೋಗಿಗಳಿಗೆ, ದಾಖಲಾಗುವುದಕ್ಕೆ ನಿರ್ದೇಶನಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ರೀತಿಯಲ್ಲಿ ವೈದ್ಯಕೀಯ ಕೇಂದ್ರದ ಪ್ರತಿಯೊಂದು ವಿಭಾಗದಲ್ಲಿ ವೈದ್ಯಕೀಯ ಪರೀಕ್ಷೆ ಹಾಗು ಚಿಕಿತ್ಸೆಗಾಗಿ ಅಂಥ ವೈದ್ಯಕೀಯ ಕೇಂದ್ರದಲ್ಲಿ ಶಸ್ತ್ರಚಿಕಿತ್ಸೆಗಾಗಿ ಒದಗಿಸಲಾದ ಹಾಸಿಗೆಗಳ ಒಟ್ಟು ಸಂಖ್ಯೆಯ ಶೇಕಡಾ ಹತ್ತರಷ್ಟನ್ನು ಮತ್ತು ಚಿಕಿತ್ಸೆ ನೀಡಲಾಗುವ ರೋಗಿಗಳ ಒಟ್ಟು ಸಂಖ್ಯೆಯ ಶೇಕಡಾ ಹತ್ತರಷ್ಟನ್ನು ಮೀಸಲಿಸುವುದು ಮತ್ತು ಕಾಯ್ದಿರಿಸುವುದು;

(ಡಿ) ನಿರ್ದೇಶನಗಳಲ್ಲಿ ಅಥವಾ ಅದರಡಿಯಲ್ಲಿ ಹೊರಡಿಸಿದ ಸಾಮಾನ್ಯ ಅಥವಾ ವಿಶೇಷ ಆದೇಶಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಅಂಥ ಇತರ ಪ್ರಾಸಂಗಿಕ ಅಥವಾ ಪೂರಕ ಅಗತ್ಯಗಳನ್ನು ಪಾಲಿಸುವುದು:

ಪರಂತು, ಮೇಲೆ ಹೇಳಿದಂತೆ ಯಾವುದೇ ನಿರ್ದೇಶನಗಳನ್ನು ನೀಡುವಾಗ, ಸಾರ್ವಜನಿಕ ನ್ಯಾಸ ಆಯೋಗವು, ಅಂಥ ವೈದ್ಯಕೀಯ ಕೇಂದ್ರದಿಂದ ಈಗಾಗಲೇ ಲಭ್ಯವಾಗುವಂತೆ ಮಾಡಲಾಗಿರುವ ಅಂಥ ಸೌಲಭ್ಯಗಳನ್ನು ಪರಿಗಣನೆಗೆ ತೆಗೆದುಕೊಳ್ಳತಕ್ಕದ್ದು ಹಾಗೂ ಅಂಥ ಸೌಲಭ್ಯಗಳ ಲಭ್ಯತೆಯನ್ನು ಗಮನಿಸಿ (ಬಿ) ಮತ್ತು (ಸಿ)ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ಶೇಕಡಾವಾರಿಗೆ ಸುಸಂಗತವಾಗಿ ಮತ್ತು ಅದಕ್ಕೊಳಪಟ್ಟು ಸೂಕ್ತ ನಿರ್ದೇಶನವನ್ನು ನೀಡಬಹುದು.

(2) (ಎ) ಈ ಸಂಬಂಧದಲ್ಲಿ ರಾಜ್ಯ ಸರ್ಕಾರವು ವಿಧ್ಯುಕ್ತವಾಗಿ ಪ್ರಾಧಿಕರಿಸಿದ ಅಧಿಕಾರಿಯು ಅಥವಾ ಸ್ವತ: ಸಾರ್ವಜನಿಕ ನ್ಯಾಸ ಆಯೋಗಕ್ಕೆ ಅಥವಾ ಈ ಸಂಬಂಧದಲ್ಲಿ ಆ ಅಧಿಕಾರಿಯು ವಿದ್ಯುಕ್ತವಾಗಿ ಪ್ರಾಧಿಕರಿಸಿದ ಆತನ ಪ್ರತಿನಿಧಿಯ (1)ನೇ ಉಪ–ಪ್ರಕರಣದಡಿಯಲ್ಲಿ ಯಾವುದೇ ವೈದ್ಯಕೀಯ ಕೇಂದ್ರಕ್ಕೆ ನೀಡಲಾದ ನಿರ್ದೇಶನಗಳ ಅನುಷ್ಠಾನವನ್ನು ಪರಿಶೀಲಿಸುವುದು ಹಾಗೂ ಆ ಉದ್ದೇಶಕ್ಕಾಗಿ ನಿಯತವಾಗಿ ಅಥವಾ ಅನ್ಯಥಾ ಭೇಟಿ ನೀಡುವುದು, ಪರಿಶೀಲಿಸುವುದು ಮತ್ತು ಮಾಹಿತಿ ಹಾಗೂ ವಿವರ ಪಟ್ಟಿಕೆಗಳನ್ನು ತರಿಸಿಕೊಳ್ಳುವುದು, ಕಾನೂನು ಬದ್ಧವಾಗಿರತಕ್ಕದ್ದು.

(ಬಿ) (1)ನೇ ಉಪ–ಪ್ರಕರಣದಡಿಯಲ್ಲಿ ನೀಡಲಾದ ನಿರ್ದೇಶನಗಳನ್ನು ಪಾಲಿಸುವುದು ಹಾಗೂ (ಎ) ಖಂಡದಡಿಯಲ್ಲಿನ ಅಂಥ ನಿರ್ದೇಶನಗಳ ಅನುಷ್ಠಾನದ ಪರಿಶೀಲನೆಗಾಗಿ ಸದರಿ ಅಧಿಕಾರಿಗೆ ಅಥವಾ ಸಾರ್ವಜನಿಕ ನ್ಯಾಸ ಆಯೋಗಕ್ಕೆ ಅಥವಾ ಇದರ ಪ್ರತಿನಿಧಿಗೆ ಅಗತ್ಯವಾದ ಎಲ್ಲಾ ಸೂಕ್ತ ಸೌಲಭ್ಯಗಳು ಹಾಗೂ ನೆರವನ್ನು ಒದಗಿಸುವುದು ಹಾಗೂ ಅದರಡಿಯಲ್ಲಿನ ಅಗತ್ಯತೆಗಳನ್ನು ಪಾಲಿಸುವುದು ಅಂಥ ವೈದ್ಯಕೀಯ ಕೇಂದ್ರದ ಪ್ರತಿಯೊಬ್ಬ ನ್ಯಾಸಧಾರಿಯ ಅಥವಾ ಅದಕ್ಕೆ ಸಂಬಂಧಿಸಿದ ವ್ಯಕ್ತಿಯ ಕರ್ತವ್ಯವಾಗಿರತಕ್ಕದ್ದು.

(ಸಿ) ಅರ್ಥ ವಿವರಣೆ ಅನುಷ್ಠಾನ ಅಥವಾ (1)ನೇ ಉಪ–ಪ್ರಕರಣದಡಿಯಲ್ಲಿ ನೀಡಿದ ಯಾವುದೇ ನಿರ್ದೇಶನದ ಸಂಬಂಧದಲ್ಲಿಯ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಯಾವುದೇ ವಿವಾದ ಉಂಟಾದಲ್ಲಿ, ಅದನ್ನು ಸೂಕ್ತ ನಿರ್ದೇಶನಗಳಿಗಾಗಿ ಸಾರ್ವಜನಿಕ ನ್ಯಾಸ ಆಯೋಗದ ಮೂಲಕ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(3) (1) ಮತ್ತು (2)ನೇ ಉಪಪ್ರಕರಣದಲ್ಲಿರುವುದಾವುದೂ (4)ನೇ ಉಪ ಪ್ರಕರಣದ (ಎ) ಖಂಡದಲ್ಲಿ ಯಾವುದಕ್ಕೆ ಒಳಪಟ್ಟು ಮಂಜೂರ್ಮಾಡಲಾಗಿದೆಯೋ ಅಥವಾ ಅದು ಸ್ವೀಕರಿಸಿದೆಯೋ ಅಥವಾ ಅನ್ಯಥಾ ಉಲ್ಲೇಖಿಸಲಾದಂತೆ ಯಾವುದೇ ಅನುದಾನ, ವಿನಾಯಿತಿ, ರಿಯಾಯಿತಿ ಮುಂತಾದವುಗಳಿಗೆ ಒಳಪಟ್ಟು ಯಾವುದೇ ಪರಿಸ್ಥಿತಿಯ ಬಲದಿಂದ ಯಾವುದೇ ಅಂಥ ರಾಜ್ಯ ಅನುದಾನಿತ ನ್ಯಾಸವು, ಒದಗಿಸಿದ ಯಾವುದೇ ಸ್ವರೂಪದ ಯಾವುದೇ ವೈದ್ಯಕೀಯ ಸೌಲಭ್ಯಗಳಿಗೆ ಪ್ರತಿಕೂಲ ಪರಿಣಾಮವನ್ನು ಉಂಟುಮಾಡತಕ್ಕದ್ದಲ್ಲ ಹಾಗೂ ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಂದು ಪ್ರವರ್ತನೆಯಲ್ಲಿದ್ದಂಥ ವೈದ್ಯಕೀಯ ಸೌಲಭ್ಯಗಳನ್ನು ಮೀಸಲಿರಿಸಿದ ಮತ್ತು ಕಾಯ್ದಿರಿಸಿದ ಪ್ರವರ್ಗಗಳ ಶೇಕಡಾವಾರನ್ನು ಅವು ಮೀರಿದಲ್ಲಿ ಮೊದಲಿನಂತೆಯೇ ಮುಂದುವರೆಸತಕ್ಕದ್ದು.

(4) ಈ ಪ್ರಕರಣದ ಉದ್ದೇಶಕ್ಕಾಗಿ,–

(ಎ) "ರಾಜ್ಯ ಅನುದಾನಿತ ಸಾರ್ವಜನಿಕ ನ್ಯಾಸ" ಎಂದರೆ, ವಿಶೇಷವಾಗಿ ವೈದ್ಯಕೀಯ ಪರಿಹಾರಕ್ಕಾಗಿಯೇ ಇರುವ ಅಥವಾ ವೈದ್ಯಕೀಯ ಪರಿಹಾರ ಮತ್ತು ಇತರೆ ಧರ್ಮಾದಾಯ ಉದ್ದೇಶಗಳಿಗಾಗಿ ಇರುವ ಆಸ್ಪತ್ರೆಯನ್ನು (ಯಾವುದೇ ನರ್ಸಿಂಗ್ ಹೋಂ ಅಥವಾ ಪ್ರಸೂತಿ ಗೃಹ ಒಳಗೊಂಡಂತೆ) ಚಿಕಿತ್ಸಾಲಯಗಳನ್ನು ಅಥವಾ ವೈದ್ಯಕೀಯ ಪರಿಹಾರಕ್ಕಾಗಿನ ಯಾವುದೇ ಇತರ ಕೇಂದ್ರವನ್ನು ನಿರ್ವಹಿಸುತ್ತಿರುವಂಥ, ಮತ್ತು,

(i) ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರದಿಂದ ಅತ್ಯಲ್ಪವಿವಾದ ಅಥವಾ ರಿಯಾಯಿತಿ ದರದಲ್ಲಿ, ಒಡೆತನದ ಆಧಾರದಲ್ಲಿಯಾಗಲೀ ಅಥವಾ ಗೇಣಿ ಅಥವಾ ಅನುಮತಿ ಮತ್ತು ಲೈಸನ್ಸಿನ ಆಧಾರದ ಮೇಲಾಗಲೀ ಭೂಮಿ ಅಥವಾ ಕಟ್ಟಡದ ಯಾವುದೇ ಅನುದಾನವನ್ನು ಸ್ವೀಕರಿಸಿರುವ; ಅಥವಾ

(ii) ನ್ಯಾಸದ ಉದ್ದೇಶಗಳಿಗಾಗಿ ಯಾವುದೇ ಸಕ್ಷಮ ಪ್ರಾಧಿಕಾರದ ಮೂಲಕ ಅಭಿವೃದ್ಧಿ ನಿಯಂತ್ರಣ ನಿಯಮಗಳಿಂದ ಗಣನೀಯ ಸ್ವರೂಪದ ಯಾವುದೇ ರಿಯಾಯಿತಿ ಅಥವಾ ವಿನಾಯಿತಿ ಅಥವಾ ಸಡಿಲಗೊಳಿಸುವಿಕೆಯನ್ನು ನೀಡಲಾಗಿರುವ;

(iii) ರಾಜ್ಯ ಸರ್ಕಾರ, ಕೇಂದ್ರ ಸರ್ಕಾರ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರದಿಂದ ಯಾವುದೇ ಸಾಲ ಅಥವಾ ಖಾತರಿ ಅಥವಾ ಯಾವುದೇ ಅನಾವರ್ತಕ ಸಹಾಯಾನುದಾನ ಅಥವಾ ಇತರೆ ಹಣಕಾಸು ನೆರವನ್ನು ಸ್ವೀಕರಿಸಿದಂಥ ಅಥವಾ ಯಾವುದೇ ಆವರ್ತಕ ಸಹಾಯಾನುದಾನ ಅಥವಾ ಇತರೆ ಹಣಕಾಸು ನೆರವನ್ನು ಸ್ವೀಕರಿಸುತ್ತಿರುವ,

– ಸಾರ್ವಜನಿಕ ನ್ಯಾಸ.

(ಬಿ) "ನಿರ್ಗತಿಕ ವ್ಯಕ್ತಿ" ಎಂದರೆ, ಯಾರ ವಾರ್ಷಿಕ ಒಟ್ಟು ಆದಾಯವು ಮೂರು ಸಾವಿರದ ಆರುನೂರು ರೂಪಾಯಿಗಳನ್ನು ಅಥವಾ ರಾಜ್ಯ ಸರ್ಕಾರವು ಅಧಿಕೃತ ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂಥ ಇತರೆ ಮಿತಿಗಳನ್ನು ಮೀರುವುದಿಲ್ಲವೋ, ಆ ವ್ಯಕ್ತಿ.

(ಸಿ) "ದುರ್ಬಲ ವರ್ಗಗಳಿಗೆ ಸೇರಿದ ವ್ಯಕ್ತಿ" ಎಂದರೆ, ವ್ಯಕ್ತಿಯು ನಿರ್ಗತಿಕನಾಗಿರದ ಆದರೆ, ಯಾರ ವಾರ್ಷಿಕ ಆದಾಯವು ಹದಿನೈದು ಸಾವಿರ ರೂಪಾಯಿಗಳನ್ನು ಅಥವಾ ರಾಜ್ಯ ಸರ್ಕಾರವು ಅಧಿಕೃತ ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂಥ ಇತರೆ ಮಿತಿಯನ್ನು ಮೀರುವುದಿಲ್ಲವೋ, ಆ ವ್ಯಕ್ತಿ.

(ಡಿ) (1)ನೇ ಉಪ–ಪ್ರಕರಣದಡಿಯಲ್ಲಿ ಮೀಸಲಿಡಿಸಿದ ಮತ್ತು ಕಾಯ್ದಿರಿಸಿದ ಶೇಕಡಾವಾರಿನ ವ್ಯಾಪ್ತಿಯೊಳಗೆ ಬರುವ ವ್ಯಕ್ತಿಯನ್ನು ರೋಗಿಯಾಗಿ ದಾಖಲು ಮಾಡಿಕೊಳ್ಳುವುದಕ್ಕೆ ಅಥವಾ ಚಿಕಿತ್ಸೆ ನೀಡುವ ಮೊದಲು, ರೋಗಿಯ ಪ್ರವರ್ಗವನ್ನು ತಿಳಿದುಕೊಂಡು ವಿದ್ಯುಕ್ತ ಸತ್ಯಾಪನೆ ಮಾಡಿ ಮತ್ತು ನಿಯಮಿಸಲಾದ ರೀತಿಯಲ್ಲಿ ಈ ಉದ್ದೇಶಕ್ಕಾಗಿ ನಿರ್ವಹಿಸಲಾಗುತ್ತಿರುವ ರಿಜಿಸ್ಟರಿನಲ್ಲಿ ದಾಖಲಿಸುವುದು, ಪ್ರತಿಯೊಂದು ವೈದ್ಯಕೀಯ ಕೇಂದ್ರದ ಆಡಳಿತವನ್ನು ನಡೆಸುತ್ತಿರುವ ನಿಕಾಯದ (ಇತರ ಯಾವುದಾದರೂ ಹೆಸರಿನಿಂದ ಕರೆದಿರಲಿ) ಕರ್ತವ್ಯವಾಗಿರತಕ್ಕದ್ದು. ಒಂದು ವೇಳೆ ರೋಗಿಯ ಪ್ರವರ್ಗದ ಬಗ್ಗೆ ಯಾವುದೇ ವಿವಾದ ಉಂಟಾದಲ್ಲಿ ಅದನ್ನು ಸಾರ್ವಜನಿಕ ನ್ಯಾಸ ಆಯೋಗದ ಮೂಲಕ ರಾಜ್ಯ ಸರ್ಕಾರಕ್ಕೆ ಸೂಕ್ತ ನಿರ್ದೇಶನಕ್ಕಾಗಿ ಉಲ್ಲೇಖಿಸತಕ್ಕದ್ದು.

(5) ಈ ಪ್ರಕರಣದ ಮೇಲೆ ಹೇಳಿದ ಉಪಬಂಧಗಳಲ್ಲಿ ಏನೇ ಒಳಗೊಂಡಿದ್ದರೂ, ಸಂತಾನ ಹರಣ ಶಸ್ತ್ರ ಚಿಕಿತ್ಸೆ ಅಥವಾ ಇಂಟ್ರಾಅಕ್ಯುಲರ್ ಶಸ್ತ್ರಚಿಕಿತ್ಸೆಗೆ ಒಳಗಾಗಲು ಬಯಸುವಂಥ ಅಥವಾ ರಾಜ್ಯ ಸರ್ಕಾರವು ಈ ಸಂಬಂಧದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಶಸ್ತ್ರಚಿಕಿತ್ಸೆ ಅಥವಾ ವೈದ್ಯಕೀಯ ಚಿಕಿತ್ಸೆಗೆ ಒಳಗಾಗಲು ಬಯಸುವಂಥ ವ್ಯಕ್ತಿಯು, ಯಾವುದೇ ಆಸ್ಪತ್ರೆ ಅಥವಾ ಇತರ ವೈದ್ಯಕೀಯ ಕೇಂದ್ರದಲ್ಲಿ ಈ ಪ್ರಕರಣದಡಿಯಲ್ಲಿ ಮೀಸಲಿರಿಸಿದ ಅಥವಾ ಕಾಯ್ದಿರಿಸಿದ ಕೋಟಾದಲ್ಲಿ ದಾಖಲಾತಿಯನ್ನು ಕೋರಲು ಹಕ್ಕುಳ್ಳವನಾಗಿರತಕ್ಕದ್ದಲ್ಲ ಮತ್ತು ಅನುಮತಿಸತಕ್ಕದ್ದಲ್ಲ.

**48. ವಿಚಾರಣೆಗಳನ್ನು ಪ್ರಾರಂಭಿಸಲು ಅಧಿಕಾರ.–** (1) ಯಾವುದೇ ಸಾರ್ವಜನಿಕ ನ್ಯಾಸದ ಸಂಬಂಧದಲ್ಲಿ ಹಿತಾಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯಿಂದ ಲಿಖಿತ ಫಿರ್ಯಾದನ್ನು ಸ್ವೀಕರಿಸಿದ ಮೇಲಾಗಲಿ ಅಥವಾ ತಾನಾಗಿಯೇ ಆಗಲಿ, ಸಾರ್ವಜನಿಕ ನ್ಯಾಸ ಆಯೋಗ ಅಥವಾ ಉಪ ಸಾರ್ವಜನಿಕ ನ್ಯಾಸ ಆಯುಕ್ತರು ಸಾಮಾನ್ಯವಾಗಿ ಅಥವಾ ನಿರ್ದಿಷ್ಟ ಉದ್ದೇಶಗಳಿಗಾಗಿ ಇರುವ ಧರ್ಮಾದಾಯಗಳಿಗೆ ಅಥವಾ ಒಂದು ನಿರ್ದಿಷ್ಟ ಧರ್ಮಾದಾಯಕ್ಕೆ ಅಥವಾ ಧರ್ಮಾದಾಯಗಳ ವರ್ಗಕ್ಕೆ ಸಂಬಂಧಿಸಿದಂತೆ ವಿಚಾರಣೆಯನ್ನು ಆರಂಭಿಸಬಹುದು.

(2) ಮೇಲೆ ಹೇಳಿದ ಅಧಿಕಾರಿಗಳು ಸ್ವತ: ತಾವಾಗಿಯೇ ವಿಚಾರಣೆಯನ್ನು ನಡೆಸಬಹುದು ಅಥವಾ 41ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ಪ್ರಾಧಿಕೃತ ಅಧಿಕಾರಿಗೆ ಅಂಥ ವಿಚಾರಣೆಯನ್ನು ವಹಿಸಿಕೊಡಬಹುದು. ವಿಚಾರಣೆಯನ್ನು ನಿಯಮಿಸಬಹುದಾದ ವಿಧಾನದಲ್ಲಿ ನಡೆಸಬಹುದು.

(3) ಯಾವುದೇ ಅಂಥ ವಿಚಾರಣೆಯ ಉದ್ದೇಶಕ್ಕಾಗಿ, ವಿಚಾರಣೆ ನಡೆಸುವ ಅಧಿಕಾರಿಯು, ಯಾವೊಬ್ಬ ವ್ಯಕ್ತಿಯನ್ನು, ಸಾಕ್ಷ್ಯವನ್ನು ನೀಡುವುದಕ್ಕಾಗಿ ಅಥವಾ ಪ್ರಶ್ನಿತವಾಗಿರುವ ಯಾವುದೇ ವಿಷಯಕ್ಕೆ ಸಂಬಂಧಪಟ್ಟ, ತನ್ನ ಅಭಿರಕ್ಷೆಯಲ್ಲಿ ಅಥವಾ ನಿಯಂತ್ರಣದಲ್ಲಿರುವ ದಸ್ತಾವೇಜುಗಳನ್ನು ವಿಚಾರಣೆಯಲ್ಲಿ ಹಾಜರುಪಡಿಸುವಂತೆ ಹಾಗೂ ನಿರ್ದಿಷ್ಟಪಡಿಸಿದ ಕಾಲದಲ್ಲಿ ಮತ್ತು ಸಮಯದಲ್ಲಿ ಹಾಜರಾಗುವಂತೆ ನೋಟೀಸಿನ ಮೂಲಕ ಅಗತ್ಯಪಡಿಸಬಹುದು. ಕಾರ್ಯವಿಧಾನವು ನಿಯಮಿಸಬಹುದಾದಂತೆ ಇರತಕ್ಕದ್ದು.

(4) ವಿಚಾರಣೆಯನ್ನು ಪೂರ್ಣಗೊಳಿಸಿದ ತರುವಾಯ, ವಿಚಾರಣೆ ನಡೆಸುವ ವ್ಯಕ್ತಿಯು (ಸಾರ್ವಜನಿಕ ನ್ಯಾಸ ಆಯೋಗವಲ್ಲದ) ಅಂಥ ವಿಚಾರಣೆಯನ್ನು ಆತನಿಗೆ ವಹಿಸಿದ ಅಧಿಕಾರಿಗೆ ತನ್ನ ವರದಿಯನ್ನು ಸಲ್ಲಿಸತಕ್ಕದ್ದು.

(5) ಸಂಬಂಧಪಟ್ಟ ಪ್ರದೇಶದ ಉಪ ಸಾರ್ವಜನಿಕ ನ್ಯಾಸ ಆಯುಕ್ತರು ತಮ್ಮ ಸ್ವಂತ ವರದಿಯನ್ನು ಅಥವಾ ಈ ಪ್ರಕರಣದ ಅಡಿಯಲ್ಲಿ ತಾನು ಸ್ವೀಕರಿಸಿದ ವರದಿಯನ್ನು, ಸಾರ್ವಜನಿಕ ನ್ಯಾಸ ಆಯೋಗಕ್ಕೆ ಸಲ್ಲಿಸತಕ್ಕದ್ದು ಅಥವಾ ಅವಶ್ಯಕವಿದ್ದಲ್ಲಿ 42ನೇ ಪ್ರಕರಣದ ಅಡಿಯಲ್ಲಿ ಮುಂದುವರಿಯಬಹುದು ಅಥವಾ ಅದರ ಮೇಲೆ ತನ್ನ ಷರಾಗಳೊಡನೆ, ವರದಿಯ ಪ್ರತಿಯನ್ನು ಸಾರ್ವಜನಿಕ ನ್ಯಾಸ ಆಯೋಗಕ್ಕೆ ಕಳುಹಿಸಿಕೊಡಬಹುದು. ಪ್ರಕರಣವು ಮೇಲ್ನೋಟಕ್ಕೆ ನ್ಯಾಸಧಾರಿಗಳ ವಿರುದ್ಧ ಸಮ್ಮತವಾದುದೆಂದು ಸಾರ್ವಜನಿಕ ನ್ಯಾಸ ಆಯೋಗಕ್ಕೆ ಮನದಟ್ಟಾದರೆ, ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಅದು ಅವಶ್ಯಕ ಕ್ರಮ ಕೈಗೊಳ್ಳಬಹುದು.

(6) ಸಾರ್ವಜನಿಕ ನ್ಯಾಸ ಆಯೋಗವು, ತಾನು ಸೂಕ್ತವೆಂದು ಭಾವಿಸಬಹುದಾದಂಥ ಕ್ರಮಕ್ಕಾಗಿ, ಈ ಪ್ರಕರಣದ ಅಡಿಯಲ್ಲಿ ಮಾಡಿದ ಯಾವುದೇ ವಿಚಾರಣೆಯ ವ್ಯವಹರಣೆಗಳನ್ನು ತರಿಸಿಕೊಳ್ಳಬಹುದು.

**49. ನ್ಯಾಸಧಾರಿಯ ಅಮಾನತ್ತು, ತೆಗೆದುಹಾಕುವಿಕೆ ಮತ್ತು ವಜಾ.–** (1) ಸಾರ್ವಜನಿಕ ನ್ಯಾಸ ಆಯೋಗವು, ಒಬ್ಬ ನ್ಯಾಸಧಾರಿಯ ಅಥವಾ ನ್ಯಾಸದಲ್ಲಿ ಹಿತಾಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯ ಅರ್ಜಿಯ ಮೇಲಾಗಲಿ ಅಥವಾ 48ನೇ ಪ್ರಕರಣದ ಅಡಿಯಲ್ಲಿ ವರದಿಯನ್ನು ಸ್ವೀಕರಿಸಿದ ತರುವಾಯ ಅಥವಾ ತಾನಾಗಿಯೇ, ಸಾರ್ವಜನಿಕ ನ್ಯಾಸದ ಯಾವೊಬ್ಬ ನ್ಯಾಸಧಾರಿಯು,–

(ಎ) ಲೆಕ್ಕಪತ್ರಗಳನ್ನು, ವರದಿಯನ್ನು ಅಥವಾ ವಿವರಪಟ್ಟಿಗಳನ್ನು ಸಲ್ಲಿಸುವಲ್ಲಿ ನಿರಂತರವಾಗಿ ತಪ್ಪು ಮಾಡುತ್ತಿದ್ದರೆ;

(ಬಿ) ಈ ಅಧಿನಿಯಮದ ಉಪಬಂಧಗಳ ಅಥವಾ ರಾಜ್ಯ ಸರ್ಕಾರವು, ಅದರ ಅಡಿಯಲ್ಲಿ ರಚಿಸಿದ ನಿಯಮಗಳ ಅಡಿಯಲ್ಲಿ, ಸಾರ್ವಜನಿಕ ನ್ಯಾಸ ಆಯೋಗವು ನೀಡಿದ ಯಾವುವೇ ಕಾನೂನುಬದ್ಧ ಆದೇಶಗಳನ್ನು ಉದ್ದೇಶಪೂರ್ವಕವಾಗಿ ಪಾಲಿಸದಿದ್ದರೆ;

(ಸಿ) ನ್ಯಾಸದ ಸಂಬಂಧದಲ್ಲಿ, ನಿರಂತರವಾಗಿ ತನ್ನ ಕರ್ತವ್ಯವನ್ನು ನಿರ್ಲಕ್ಷಿಸುತ್ತಿದ್ದರೆ ಅಥವಾ ಯಾವುದೇ ದುಷ್ಕೃತ್ಯ ಮಾಡುತ್ತಿದ್ದರೆ ಅಥವಾ ಯಾವುದೇ ಅಕ್ರಮ ಮಾಡುತ್ತಿದ್ದರೆ ಅಥವಾ ನಂಬಿಕೆದ್ರೋಹ ಮಾಡುತ್ತಿದ್ದರೆ ;

(ಡಿ) ಅವನು ನ್ಯಾಸಧಾರಿಯಾಗಿರುವ ನ್ಯಾಸದ ಸ್ವತ್ತುಗಳ ದುರ್ವಿನಿಯೋಗ ಮಾಡುತ್ತಿದ್ದರೆ ಅಥವಾ ಅನುಚಿತವಾಗಿ ವ್ಯವಹರಿಸುತ್ತಿದ್ದರೆ;

(ಇ) ನ್ಯಾಸದ ಸಂಬಂಧದಲ್ಲಿ ತಾನು ನ್ಯಾಸಧಾರಿಯಾಗಿರುವುದಕ್ಕೆ ಅಸಂಗತವಾಗಿರುವ ಯಾವುದೇ ಸ್ಥಾನಮಾನವನ್ನು ಒಪ್ಪಿಕೊಂಡರೆ; ಅಥವಾ

(ಎಫ್) ನೈತಿಕ ಅಧಃಪತನವನ್ನೊಳಗೊಳ್ಳುವ ಒಂದು ಅಪರಾಧದ ನಿರ್ಣೀತ ಅಪರಾಧಿಯಾಗಿದ್ದರೆ,

– ಆತನನ್ನು ಅಮಾನತ್ತುಗೊಳಿಸಬಹುದು, ತೆಗೆದುಹಾಕಬಹುದು ಅಥವಾ ವಜಾ ಮಾಡಬಹುದು.

(2) ಸಾರ್ವಜನಿಕ ನ್ಯಾಸ ಆಯೋಗವು, (1) ನೇ ಉಪ ಪ್ರಕರಣದ ಅಡಿಯಲ್ಲಿ ಕ್ರಮ ಕೈಗೊಳ್ಳಲು ಪ್ರಸ್ತಾವಿಸಿದಾಗ, ನ್ಯಾಸಧಾರಿಯ ಅಥವಾ ಕ್ರಮ ಕೈಗೊಳ್ಳಲು ಪ್ರಸ್ತಾವಿಸಲಾದ ವ್ಯಕ್ತಿಯ ವಿರುದ್ಧ ಆರೋಪ ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಆತನಿಗೆ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ನೀಡತಕ್ಕದ್ದು. ಅಮಾನತ್ತು, ತೆಗೆದುಹಾಕುವಿಕೆ ಅಥವಾ ವಜಾ ಆದೇಶದಲ್ಲಿ, ನ್ಯಾಸಧಾರಿಯ ವಿರುದ್ಧ ಮಾಡಲಾದ ಆರೋಪಗಳನ್ನು, ಆತನ ವಿವರಣೆಯನ್ನು ಮತ್ತು ಪ್ರತಿಯೊಂದು ಆರೋಪದ ಮೇಲಿನ ತೀರ್ಮಾನವನ್ನು, ಅದರ ಕಾರಣಗಳ ಸಹಿತವಾಗಿ ತಿಳಿಸತಕ್ಕದ್ದು.

(3) ಒಬ್ಬ ನ್ಯಾಸಧಾರಿಯ ವಿರುದ್ಧ ಮಾಡಲಾದ ಆರೋಪಗಳ ವಿಲೆಯು ಇತ್ಯರ್ಥದಲ್ಲಿರುವಾಗ, ಸಾರ್ವಜನಿಕ ನ್ಯಾಸ ಆಯೋಗವು, ನ್ಯಾಸಧಾರಿಯನ್ನು ಅಮಾನತ್ತಿನಲ್ಲಿಡಬಹುದು.

(4) ಸಾರ್ವಜನಿಕ ನ್ಯಾಸ ಆಯೋಗವು, ಯಾವೊಬ್ಬ ನ್ಯಾಸಧಾರಿಯನ್ನು ಅಮಾನತ್ತು ಮಾಡುವ, ತೆಗೆದುಹಾಕುವ ಅಥವಾ ವಜಾ ಮಾಡುವ ಆದೇಶವನ್ನು ಮಾಡಿದ್ದಲ್ಲಿ ಮತ್ತು ಅಂಥ ನ್ಯಾಸಧಾರಿಯು ಏಕೈಕ ನ್ಯಾಸಧಾರಿಯಾಗಿದ್ದಲ್ಲಿ ಅಥವಾ ಒಬ್ಬರಿಗಿಂತ ಹೆಚ್ಚು ಜನ ನ್ಯಾಸಧಾರಿಗಳಿದ್ದಲ್ಲಿ, ಮತ್ತು ಉಳಿದ ನ್ಯಾಸಧಾರಿಗಳು ನ್ಯಾಸದ ಲಿಖಿತ ಪತ್ರಕ್ಕನುಸಾರವಾಗಿ, ಖಾಲಿ ಸ್ಥಾನವನ್ನು ಭರ್ತಿ ಮಾಡದೇ ನ್ಯಾಸದ ಪ್ರಕಾರ್ಯಗಳನ್ನು ಅಥವಾ ಆಡಳಿತವನ್ನು ನಡೆಸುವಂತಿಲ್ಲದಿದ್ದಲ್ಲಿ, ಆಗ, ಆ ಪ್ರಕರಣದಲ್ಲಿ ಸಾರ್ವಜನಿಕ ನ್ಯಾಸ ಆಯೋಗವು ನ್ಯಾಸದ ಕರ್ತವ್ಯಗಳನ್ನು ನಿರ್ವಹಿಸಲು ಮತ್ತು ಪ್ರಕಾರ್ಯಗಳನ್ನು ನೆರವೇರಿಸಲು ಒಬ್ಬ ಸೂಕ್ತ ವ್ಯಕ್ತಿಯನ್ನು ನೇಮಕ ಮಾಡತಕ್ಕದ್ದು ಮತ್ತು ಅಂಥ ವ್ಯಕ್ತಿಯು, ನ್ಯಾಸದ ಲಿಖಿತ ಪತ್ರದ ಉಪಬಂಧಗಳಿಗನುಸಾರವಾಗಿ ವಿಧ್ಯುಕ್ತವಾಗಿ ಒಬ್ಬ ನ್ಯಾಸಧಾರಿಯನ್ನು ನೇಮಕ ಮಾಡುವವರೆಗೆ ಮಾತ್ರ ಪದಧಾರಣ ಮಾಡತಕ್ಕದ್ದು.

(5) (1)ನೇ ಉಪ ಪ್ರಕರಣದ ಅಡಿಯಲ್ಲಿ ಮಾಡಿದ ಆದೇಶದಿಂದ ಬಾಧಿತನಾದ ಒಬ್ಬ ನ್ಯಾಸಧಾರಿಯು, ಅಮಾನತ್ತು, ತೆಗೆದುಹಾಕುವ ಅಥವಾ ವಜಾ ಮಾಡುವ ಆದೇಶವನ್ನು ನೀಡಿದ ದಿನಾಂಕದಿಂದ ತೊಂಬತ್ತು ದಿನಗಳೊಳಗೆ ಅಂಥ ಆದೇಶದ ವಿರುದ್ಧ ಉಚ್ಚ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಬಹುದು.

(6) ಸಾರ್ವಜನಿಕ ನ್ಯಾಸ ಆಯೋಗದ ಆದೇಶವು, ನ್ಯಾಯಾಲಯದ ಯಾವುದೇ ಆದೇಶ ಅಥವಾ ಅಪೀಲಿನಲ್ಲಿಯ ಆದೇಶಕ್ಕೆ ಒಳಪಟ್ಟು ಅಂತಿಮವಾಗಿರತಕ್ಕದ್ದು.

(7) ಯಾವ ತೀರ್ಮಾನದ ವಿರುದ್ಧ ಸಾಮಾನ್ಯವಾಗಿ ಅಪೀಲನ್ನು ಸಲ್ಲಿಸಲಾಗುತ್ತದೆಯೋ ಅಂಥ ತೀರ್ಮಾನವು ಡಿಕ್ರಿಯಾಗಿದ್ದರೆ ಹೇಗೋ ಹಾಗೆ, ಸಾರ್ವಜನಿಕ ನ್ಯಾಸ ಆಯೋಗದ ತೀರ್ಮಾನದ ವಿರುದ್ಧ ಉಚ್ಚ ನ್ಯಾಯಾಲಯಕ್ಕೆ ಅಪೀಲನ್ನು ಸಲ್ಲಿಸತಕ್ಕದ್ದು.

**50. ಧರ್ಮಾದಾಯಗಳ ರಕ್ಷಣೆಗಾಗಿ ಕ್ರಮ ಕೈಗೊಳ್ಳುವ ಅಧಿಕಾರ.–** (1) ಉಪ ಸಾರ್ವಜನಿಕ ನ್ಯಾಸ ಆಯುಕ್ತರ ವರದಿಯ ಮೂಲಕವಾಗಲಿ ಅಥವಾ ಹಿತಾಸಕ್ತಿಯನ್ನು ಹೊಂದಿದ ಕನಿಷ್ಠ ಇಬ್ಬರು ವ್ಯಕ್ತಿಗಳ ಅಫಿದಾವಿತ್ತಿನ ಬೆಂಬಲದೊಂದಿಗೆ ಒಂದು ಅರ್ಜಿಯ ಮೂಲಕವಾಗಲಿ,–

(ಎ) ಯಾವುದೇ ನ್ಯಾಸದ ಸ್ವತ್ತು ಹಾಳಾಗುವುದು ಅಥವಾ ಹಾನಿಗೊಳಗಾಗುವುದು ಅಥವಾ ಯಾವೊಬ್ಬ ನ್ಯಾಸಧಾರಿಯ ಅಥವಾ ಯಾವೊಬ್ಬ ಇತರ ವ್ಯಕ್ತಿಯಿಂದ ಅಕ್ರಮವಾಗಿ ಪರಭಾರೆಯಾಗುತ್ತಿದೆಯೆಂದು; ಅಥವಾ

(ಬಿ) ನ್ಯಾಸಧಾರಿ ಅಥವಾ ಅಂಥ ವ್ಯಕ್ತಿಯು, ಆ ಸ್ವತ್ತನ್ನು ತೆಗೆದುಹಾಕುವ ಅಥವಾ ವಿಲೆ ಮಾಡುವ ಬೆದರಿಕೆಯನ್ನುಂಟು ಮಾಡಿದ್ದರೆ ಅಥವಾ ಉದ್ದೇಶ ಹೊಂದಿದ್ದಾನೆಂದು,

– ಸಾರ್ವಜನಿಕ ನ್ಯಾಸ ಆಯೋಗದ ಗಮನಕ್ಕೆ ತಂದರೆ, ಆಗ ಸಾರ್ವಜನಿಕ ನ್ಯಾಸ ಆಯೋಗವು, ಆದೇಶದ ಮೂಲಕ, ಅಂಥ ಸ್ವತ್ತನ್ನು ಹಾಳು ಮಾಡುವುದರಿಂದ, ಹಾನಿ ಮಾಡುವುದರಿಂದ, ಪರಭಾರೆಮಾಡುವುದರಿಂದ, ಮಾರಾಟಮಾಡುವುದರಿಂದ, ಸಾಗಿಸುವುದರಿಂದ ಅಥವಾ ವಿಲೆವಾರಿ ಮಾಡುವುದರಿಂದ ಉಳಿಸುವ ಅಥವಾ ತಡೆಯುವ ಉದ್ದೇಶಕ್ಕಾಗಿ, ಒಂದು ತಾತ್ಕಾಲಿಕ ನಿರ್ಬಂಧಕಾಜ್ಞೆಯನ್ನು ನೀಡಬಹುದು ಅಥವಾ ನಿರ್ಬಂಧಕಾಜ್ಞೆಯ ಅವಧಿಗೆ ಸಂಬಂಧಿಸಿದಂತೆ ನಿಬಂಧನೆಗಳ ಮೇಲೆ, ರಕ್ಷಣೆ ನೀಡುವ, ಭದ್ರತೆಯನ್ನು ಒದಗಿಸುವ, ಸ್ವತ್ತನ್ನು ಹಾಜರುಪಡಿಸುವ ಅಥವಾ ಅನ್ಯಥಾ ತಾನು ಸೂಕ್ತವೆಂದು ಭಾವಿಸಬಹುದಾದಂತೆ ಅಂಥ ಇತರ ಆದೇಶವನ್ನು ಮಾಡಬಹುದು.

(2) ಸಾರ್ವಜನಿಕ ನ್ಯಾಸ ಆಯೋಗವು, ಅಂಥ ಎಲ್ಲಾ ಪ್ರಕರಣಗಳಲ್ಲಿ, ನಿರ್ಬಂಧಕಾಜ್ಞೆಯನ್ನು ನೀಡುವ ಉದ್ದೇಶವು, ವಿಳಂಬದಿಂದಾಗಿ ವಿಫಲವಾಗಬಹುದೆಂದು ಅದಕ್ಕೆ ಕಂಡುಬಂದ ಹೊರತಾಗಿ ನಿರ್ಬಂಧಕಾಜ್ಞೆಯನ್ನು ನೀಡುವ ಮೊದಲು, ತನ್ನ ಗಮನಕ್ಕೆ ಬಂದ ವಾಸ್ತವಾಂಶಗಳನ್ನು ನ್ಯಾಸಧಾರಿಯ ಅಥವಾ ಸಂಬಂಧಪಟ್ಟ ವ್ಯಕ್ತಿಯ ಗಮನಕ್ಕೆ ತರತಕ್ಕದ್ದು.

(3) ಸಾರ್ವಜನಿಕ ನ್ಯಾಸ ಆಯೋಗವು, ನ್ಯಾಸಧಾರಿಯ ಅಥವಾ ಸಂಬಂಧಪಟ್ಟ ವ್ಯಕ್ತಿಯ ಸುನಾವಣೆ ಮಾಡಿದ ತರುವಾಯ ಮತ್ತು ತಾನು ಸೂಕ್ತವೆಂದು ಭಾವಿಸಿದಂಥ ವಿಚಾರಣೆಯನ್ನು ನಡೆಸಿದ ತರುವಾಯ, ನಿರ್ಬಂಧಕಾಜ್ಞೆ ಆದೇಶವನ್ನು ಸ್ಥಿರೀಕರಿಸಬಹುದು, ರದ್ದುಗೊಳಿಸಬಹುದು ಅಥವಾ ಬದಲಾವಣೆ ಮಾಡಬಹುದು ಅಥವಾ ತಳ್ಳಿಹಾಕಬಹುದು ಅಥವಾ ಯಾವುದೇ ಇತರ ಯುಕ್ತ ಆದೇಶವನ್ನು ಹೊರಡಿಸಬಹುದು.

(4) ಅವಿಧೇಯತೆ ಅಥವಾ ಯಾವುದೇ ನಿರ್ಬಂಧಕಾಜ್ಞೆಯ ಅದರ ಯಾವುದೇ ನಿಬಂಧನೆಗಳ ಅಥವಾ ಈ ಅಧಿನಿಯಮದ ಅಡಿಯಲ್ಲಿ ಹೊರಡಿಸಲಾದ ಯಾವುದೇ ಆದೇಶದ ಉಲ್ಲಂಘನೆಯ ಸಂದರ್ಭದಲ್ಲಿ, ಸಾರ್ವಜನಿಕ ನ್ಯಾಸ ಆಯೋಗವು ಉಚ್ಚ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬಹುದು; ಅದು, ಸಾರ್ವಜನಿಕ ನ್ಯಾಸ ಆಯೋಗದ ಮತ್ತು ಬಾಧಿತನಾದ ವ್ಯಕ್ತಿಯ ಸುನಾವಣೆ ಮಾಡಿದ ತರುವಾಯ, ಅಂಥ ಅವಿಧೇಯತೆ ಅಥವಾ ಉಲ್ಲಂಘನೆಯ ತಪ್ಪಿತಸ್ಥನಾದ ಅಂಥ ವ್ಯಕ್ತಿಯ ಸ್ವತ್ತನ್ನು ಜಫ್ತಿ ಮಾಡುವಂತೆ ಆದೇಶಿಸಬಹುದು ಮತ್ತು ಅಂಥ ವ್ಯಕ್ತಿಯನ್ನು ಆರು ತಿಂಗಳಿಗೆ ಮೀರದ ಅವಧಿಯವರೆಗೆ ಸಿವಿಲ್ ಸೆರೆಮನೆಯಲ್ಲಿ ಇಡುವಂತೆ ಕೂಡಾ ಆದೇಶ ಮಾಡಬಹುದು. ಈ ಉಪಪ್ರಕರಣದ ಅಡಿಯಲ್ಲಿನ ಯಾವುದೇ ಜಫ್ತಿಯು, ಒಂದು ವರ್ಷಕ್ಕಿಂತ ಹೆಚ್ಚಾಗಿ ಜಾರಿಯಲ್ಲಿ ಇರತಕ್ಕದ್ದಲ್ಲ, ಆ ಅವಧಿಯ ಕೊನೆಯಲ್ಲಿ, ಅವಿಧೇಯತೆ ಅಥವಾ ಉಲ್ಲಂಘನೆಯು ಮುಂದುವರೆದಲ್ಲಿ, ಜಫ್ತಿಯಾದ ಸ್ವತ್ತನ್ನು ಸಾರ್ವಜನಿಕ ಹರಾಜಿನಲ್ಲಿ ಮಾರಾಟ ಮಾಡಬಹುದು ಮತ್ತು ನ್ಯಾಯಾಲಯವು ತಾನು ಸೂಕ್ತವೆಂದು ಭಾವಿಸುವಂತೆ, ಆ ಉತ್ಪತ್ತಿಯಿಂದ ನಷ್ಟ ಪರಿಹಾರ ನೀಡಬೇಕೆಂಬ ಬಗ್ಗೆ ಐತೀರ್ಪು ನೀಡಬಹುದು ಮತ್ತು ಬಾಕಿ ಯಾವುದಾದರೂ ಇದ್ದಲ್ಲಿ, ಅದನ್ನು ಹಕ್ಕುಳ್ಳ ವ್ಯಕ್ತಿಗೆ ಸಂದಾಯ ಮಾಡತಕ್ಕದ್ದು, ಮತ್ತು ಆ ತರುವಾಯ ಸಾರ್ವಜನಿಕ ನ್ಯಾಸ ಆಯೋಗವು ಈ ಪ್ರಕರಣದಡಿಯಲ್ಲಿ ನೀಡಿದ ತಾತ್ಕಾಲಿಕ ನಿರ್ಬಂಧಕಾಜ್ಞೆ ಅಥವಾ ಹೊರಡಿಸಿದ ಯಾವುದೇ ಆದೇಶವು, ಜಾರಿಯಲ್ಲಿದ್ದಲ್ಲಿ, ಅದು ಕೂಡಲೇ ತೆರವಾಗತಕ್ಕದ್ದು ಅಥವಾ ಸಂದರ್ಭಾನುಸಾರ ಅದು ರದ್ದಾಗತಕ್ಕದ್ದು.

(5) ಈ ಪ್ರಕರಣದ ಅಡಿಯಲ್ಲಿ ಯಾರ ವಿರುದ್ಧವಾಗಿ ನಿರ್ಬಂಧಕಾಜ್ಞೆಯ ಆದೇಶವನ್ನು ಅಥವಾ ಯಾವುದೇ ಇತರ ಆದೇಶವನ್ನು ಹೊರಡಿಸಲಾಗಿದೆಯೋ, ಆ ನ್ಯಾಸಧಾರಿ ಅಥವಾ ವ್ಯಕ್ತಿಯು, ಅಂಥ ಆದೇಶವನ್ನು ತಿಳಿಸಿದ ದಿನಾಂಕದಿಂದ ತೊಂಬತ್ತು ದಿನಗಳೊಳಗೆ, ಅಂಥ ಆದೇಶದ ವಿರುದ್ಧ ಉಚ್ಚ ನ್ಯಾಯಾಲಯಕ್ಕೆ ಅಪೀಲು ಹೋಗಬಹುದು.

(6) ಸಾರ್ವಜನಿಕ ನ್ಯಾಸ ಆಯೋಗದ ಆದೇಶವು, ಉಚ್ಚ ನ್ಯಾಯಾಲಯದ ಅಥವಾ ಅಪೀಲಿನಲ್ಲಿನ ಯಾವುದೇ ಆದೇಶಕ್ಕೊಳಪಟ್ಟು, ಅಂತಿಮವಾಗಿರತಕ್ಕದ್ದು.

## ಅಧ್ಯಾಯ – VIII

### ಸಾರ್ವಜನಿಕ ನ್ಯಾಸ ಆಯೋಗದ ಇತರ ಪ್ರಕಾರ್ಯಗಳು ಮತ್ತು ಅಧಿಕಾರಗಳು

**51. ಸಾರ್ವಜನಿಕ ನ್ಯಾಸ ಆಯೋಗವು ನಿಗಮಿತ ನಿಕಾಯವಾಗಿರುವುದು.–** ಸಾರ್ವಜನಿಕ ನ್ಯಾಸ ಆಯೋಗವು, ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ನಿರಂತರ ಉತ್ತರಾಧಿಕಾರವನ್ನು ಮತ್ತು ಸಾಮಾನ್ಯ ಮೊಹರನ್ನು ಹೊಂದಿರತಕ್ಕದ್ದು ಹಾಗೂ ತನ್ನ ನಿಗಮಿತ ಹೆಸರಿನಲ್ಲಿ ದಾವೆ ಹೂಡಬಹುದು ಮತ್ತು ದಾವೆಗೊಳಗಾಗಬಹುದು.

**52. ಸಾರ್ವಜನಿಕ ನ್ಯಾಸ ಆಯೋಗವು 1890ರ ಅಧಿನಿಯಮ VI ರ ಅಡಿಯಲ್ಲಿನ ಧರ್ಮಾದಾಯ ದತ್ತಿಗಳ ಖಜಾಂಚಿಯಾಗಿರುವುದು.–** ಧರ್ಮಾದಾಯ ದತ್ತಿಗಳ ಅಧಿನಿಯಮ, 1890ರಲ್ಲಿ ಏನೇ ಇದ್ದರೂ, ಸಾರ್ವಜನಿಕ ನ್ಯಾಸ ಆಯೋಗವು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು:–

(ಎ) ಧರ್ಮಾದಾಯ ದತ್ತಿ ಅಧಿನಿಯಮ, 1890ರಡಿಯಲ್ಲಿ ರೂಪಿಸಲಾದ ಯಾವುದೇ ಧರ್ಮಾದಾಯ ದತ್ತಿಯ ಆಡಳಿತಕ್ಕಾಗಿ ಇರುವ ಯೋಜನೆಯನ್ನು ಮಾರ್ಪಾಟು ಮಾಡುವ ಅಥವಾ ಪ್ರತಿಯೋಜಿಸುವ ಅಧಿಕಾರ;

(ಬಿ) 41ನೇ ಪ್ರಕರಣದಡಿಯಲ್ಲಿನ ಅಧಿಕಾರಗಳನ್ನು ಚಲಾಯಿಸುವ ಅಧಿಕಾರ; ಮತ್ತು

**53. ನ್ಯಾಸಧಾರರನ್ನು ನೇಮಿಸುವ, ಅಮಾನತ್ತುಗೊಳಿಸುವ, ತೆಗೆದು ಹಾಕುವ ಅಥವಾ ರದ್ದುಗೊಳಿಸುವ ಮತ್ತು ಹೊಸ ನ್ಯಾಸಧಾರಿಯಲ್ಲಿ ಸ್ವತ್ತನ್ನು ನಿಹಿತಗೊಳಿಸುವುದಕ್ಕಾಗಿ ಸಾರ್ವಜನಿಕ ನ್ಯಾಸ ಆಯೋಗದ ಅಧಿಕಾರ.–** (1) ಸಾರ್ವಜನಿಕ ನ್ಯಾಸದಲ್ಲಿ ಹಿತಾಸಕ್ತಿಯಿರುವ ಯಾವೊಬ್ಬ ವ್ಯಕ್ತಿಯು, ಅಂಥ ನ್ಯಾಸಕ್ಕೆ ನ್ಯಾಸಧಾರಿಯು ಇಲ್ಲದಿರುವಾಗ ಅಥವಾ ಖಾಲಿ ಸ್ಥಾನವನ್ನು ತುಂಬುವವರೆಗೂ ನ್ಯಾಸದ ಆಡಳಿತ ನಡೆಸುವುದು ಅಸಾಧ್ಯವಾದಾಗ ಅಥವಾ ಅಂಥ ನ್ಯಾಸದ ನ್ಯಾಸಧಾರಿಯು,–

(ಎ) ನಿರಾಕರಿಸಿದಾಗ ಅಥವಾ ಮರಣ ಹೊಂದಿದಾಗ;

(ಬಿ) ಸಾರ್ವಜನಿಕ ನ್ಯಾಸ ಆಯೋಗದ ಅಥವಾ ಉಪ ಸಾರ್ವಜನಿಕ ನ್ಯಾಸ ಆಯುಕ್ತರ ಅಥವಾ ಈ ಸಂಬಂಧದಲ್ಲಿ ರಾಜ್ಯ ಸರ್ಕಾರವು ಪ್ರಾಧಿಕರಿಸಿದ ಯಾವೊಬ್ಬ ಅಧಿಕಾರಿಯ ಅನುಮತಿ ಪಡೆಯದೆ ನಿರಂತರ ಆರು ತಿಂಗಳುಗಳ ಅವಧಿಗೆ ಭಾರತದಿಂದ ಅನುಪಸ್ಥಿತನಾದಾಗ;

(ಸಿ) ವಿದೇಶದಲ್ಲಿ ನೆಲೆಸುವ ಉದ್ದೇಶದಿಂದ ಭಾರತವನ್ನು ಬಿಟ್ಟಿರುವಾಗ;

(ಡಿ) ದಿವಾಳಿಯೆಂದು ಘೋಷಿತನಾದಾಗ;

(ಇ) ನ್ಯಾಸದಿಂದ ಬಿಡುಗಡೆ ಹೊಂದಬೇಕೆಂದು ಬಯಸಿದಾಗ;

(ಎಫ್) ನ್ಯಾಸಧಾರಿಯಾಗಿ ಕರ್ತವ್ಯ ನಿರ್ವಹಿಸಲು ನಿರಾಕರಿಸಿದಾಗ;

(ಜಿ) ನ್ಯಾಸದಲ್ಲಿ ಕಾರ್ಯ ನಿರ್ವಹಿಸಲು ಅಸಮರ್ಥನೆಂದು ಅಥವಾ ದೈಹಿಕ ಅಸಮರ್ಥನೆಂದು ಅಥವಾ ನ್ಯಾಸಧಾರಿಯಾಗಿ ತನ್ನ ಸ್ಥಾನಮಾನದೊಂದಿಗೆ ಅಸಂಗತವಾದ ಸ್ಥಾನಮಾನವನ್ನು ಸ್ವೀಕರಿಸಿದ್ದಾನೆಂದು ಸಾರ್ವಜನಿಕ ನ್ಯಾಸ ಆಯೋಗದ ಅಭಿಪ್ರಾಯಪಟ್ಟಾಗ;

(ಎಚ್) III ನೇ ಅಧ್ಯಾಯದಲ್ಲಿ ಹೇಳಲಾದ ಯಾವುದೇ ಸಂದರ್ಭದಲ್ಲಿ, ನ್ಯಾಸದ ಆಡಳಿತವನ್ನು ನಡೆಸಲು ಲಭ್ಯನಾಗದಿರುವಾಗ; ಅಥವಾ

(ಐ) ಈ ಅಧಿನಿಯಮದಡಿಯಲ್ಲಿ ದಂಡನೀಯ ಒಂದು ಅಪರಾಧಕ್ಕಾಗಿ ಅಥವಾ ನೈತಿಕ ಅಧಃಪತನವನ್ನೊಳಗೊಂಡ ಅಪರಾಧಕ್ಕಾಗಿ ಅಪರಾದ ನಿರ್ಣಿತನಾಗಿದ್ದಾಗ,

– ಆತನನ್ನು ಅಮಾನತ್ತುಗೊಳಿಸಿದ್ದರೆ, ತೆಗೆದುಹಾಕಿದ್ದರೆ ಅಥವಾ ಬಿಡುಗಡೆಗೊಳಿಸಿದ್ದರೆ, ಹೊಸ ನ್ಯಾಸಧಾರಿಯ ನೇಮಕಕ್ಕಾಗಿ ಸಾರ್ವಜನಿಕ ನ್ಯಾಸ ಆಯೋಗಕ್ಕೆ ಅರ್ಜಿ ಸಲ್ಲಿಸಬಹುದು.

(2) ಸಾರ್ವಜನಿಕ ನ್ಯಾಸ ಆಯೋಗವು, ಪಕ್ಷಕಾರರ ಸುನಾವಣೆಯನ್ನು ಮತ್ತು ತಾನು ಸೂಕ್ತವೆಂದು ಭಾವಿಸಬಹುದಾದಂಥ ವಿಚಾರಣೆಯನ್ನು ಮಾಡಿದ ತರುವಾಯ, ಆದೇಶದ ಮೂಲಕ ನ್ಯಾಸಧಾರಿಯಾಗಿ ಯಾವೊಬ್ಬ ವ್ಯಕ್ತಿಯನ್ನು ನೇಮಿಸಬಹುದು ಅಥವಾ (1)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಯಾವುವೇ ಕಾರಣಗಳಿಗಾಗಿ ಯಾವೊಬ್ಬ ನ್ಯಾಸಧಾರಿಯನ್ನು ತೆಗೆದುಹಾಕಬಹುದು ಅಥವಾ ಬಿಡುಗಡೆ ಮಾಡಬಹುದು.

(3) (2)ನೇ ಉಪಪ್ರಕರಣದ ಅಡಿಯಲ್ಲಿ ಒಬ್ಬ ನ್ಯಾಸಧಾರಿಯನ್ನು ನೇಮಕ ಮಾಡುವಾಗ, ಸಾರ್ವಜನಿಕ ನ್ಯಾಸ ಆಯೋಗವು,–

(ಎ) ನ್ಯಾಸದ ನ್ಯಾಸಕರ್ತನ ಆಶಯಗಳಿಗೆ;

(ಬಿ) ಹೊಸ ನ್ಯಾಸಧಾರಿಯನ್ನು ನೇಮಕ ಮಾಡುವ ಅಧಿಕಾರವುಳ್ಳ, ಯಾರಾದರೂ ಇದ್ದಲ್ಲಿ, ಆ ವ್ಯಕ್ತಿಯ ಆಶಯಗಳಿಗೆ;

(ಸಿ) ನೇಮಕವು ನ್ಯಾಸದ ಕಾರ್ಯ ನಿರ್ವಹಣೆಗೆ ಪ್ರೋತ್ಸಾಹಕವಾಗಿದೆಯೋ ಅಥವಾ ಅಡ್ಡಿಯುಂಟು ಮಾಡುತ್ತದೆಯೋ ಎಂಬ ಪ್ರಶ್ನೆಗೆ;

(ಡಿ) ಸಾರ್ವಜನಿಕ ಹಿತಾಸಕ್ತಿಗೆ ಅಥವಾ ನ್ಯಾಸದಲ್ಲಿ ಹಿತಾಸಕ್ತಿಯನ್ನು ಹೊಂದಿರುವ ಸಾರ್ವಜನಿಕ ವರ್ಗಕ್ಕೆ ; ಮತ್ತು

(ಇ) ನ್ಯಾಸದ ರೂಢಿ ಮತ್ತು ಪದ್ಧತಿಗೆ.

– ಗಮನ ನೀಡತಕ್ಕದ್ದು.

(4) (2)ನೇ ಉಪಪ್ರಕರಣದ ಅಡಿಯಲ್ಲಿ ಒಬ್ಬ ಹೊಸ ನ್ಯಾಸಧಾರಿಯನ್ನು ನೇಮಕ ಮಾಡಿದ ಮೇಲೆ, ಅದೇ ಆದೇಶದ ಮೂಲಕವಾಗಲಿ ಅಥವಾ ತರುವಾಯದ ಆದೇಶದ ಮೂಲಕವಾಗಲಿ, ನ್ಯಾಸಕ್ಕೆ ಒಳಪಟ್ಟಿರುವ ಯಾವುದೇ ಸ್ವತ್ತು ಹಾಗೆ ನೇಮಕಗೊಂಡ ವ್ಯಕ್ತಿಯಲ್ಲಿ ನಿಹಿತವಾಗತಕ್ಕದ್ದೆಂದು ನಿರ್ದೇಶಿಸುವುದು ಸಾರ್ವಜನಿಕ ನ್ಯಾಸ ಆಯೋಗಕ್ಕೆ ಕಾನೂನುಬದ್ಧವಾಗಿರತಕ್ಕದ್ದು ಮತ್ತು ಅದು ಹಾಗೆ ನಿಹಿತವಾಗಿರತಕ್ಕದ್ದು.

(5) (2)ನೇ ಉಪಪ್ರಕರಣದಡಿಯಲ್ಲಿ ಸಾರ್ವಜನಿಕ ನ್ಯಾಸ ಆಯೋಗದ ಆದೇಶವು ನ್ಯಾಯಾಲಯದ ಡಿಕ್ರಿಯೆಂದು ಭಾವಿಸತಕ್ಕದ್ದು ಮತ್ತು ಅದರ ಸಂಬಂಧದಲ್ಲಿನ ಅಪೀಲನ್ನು ಉಚ್ಚ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು.

**54. ಯೋಜನೆಗಳನ್ನು ರೂಪಿಸಲು, ಸಂಯೋಜಿಸಲು ಅಥವಾ ಮಾರ್ಪಾಟು ಮಾಡಲು ಸಾರ್ವಜನಿಕ ನ್ಯಾಸ ಆಯೋಗದ ಅಧಿಕಾರ.–** (1) 52ನೇ ಪ್ರಕರಣದಲ್ಲಿ ಏನೇ ಇದ್ದರೂ, ಒಂದು ಸಾರ್ವಜನಿಕ ನ್ಯಾಸದ ಸೂಕ್ತ ನಿರ್ವಹಣೆ ಅಥವಾ ಆಡಳಿತದ ಹಿತಾಸಕ್ತಿಗಾಗಿ, ಒಂದು ಯೋಜನೆಯನ್ನು ಸಿದ್ಧಪಡಿಸತಕ್ಕದ್ದೆಂದು ಸಾರ್ವಜನಿಕ ನ್ಯಾಸ ಆಯೋಗಕ್ಕೆ ನಂಬುವ ಕಾರಣವಿದ್ದಲ್ಲಿ, ಅಥವಾ ಸಾರ್ವಜನಿಕ ನ್ಯಾಸದಲ್ಲಿ ಹಿತಾಸಕ್ತಿ ಹೊಂದಿರುವ ಇಬ್ಬರು ಅಥವಾ ಹೆಚ್ಚಿನ ವ್ಯಕ್ತಿಗಳು, ಸಾರ್ವಜನಿಕ ನ್ಯಾಸದ ಸೂಕ್ತ ನಿರ್ವಹಣೆ ಅಥವಾ ಆಡಳಿತದ ಹಿತಾಸಕ್ತಿಗಾಗಿ ಒಂದು ಯೋಜನೆಯನ್ನು ಸಿದ್ಧಪಡಿಸತಕ್ಕದ್ದೆಂದು, ನಿಯಮಿತ ವಿಧಾನದಲ್ಲಿ ಲಿಖಿತ ಅರ್ಜಿಯನ್ನು ಸಲ್ಲಿಸಿದ್ದಲ್ಲಿ, ಸಾರ್ವಜನಿಕ ನ್ಯಾಸ ಆಯೋಗವು, ಅಂಥ ನ್ಯಾಸದ ನ್ಯಾಸಧಾರಿಗಳಿಗೆ ಸುನಾವಣೆ ಮಾಡಲು ಯುಕ್ತ ಅವಕಾಶವನ್ನು ನೀಡಿದ ತರುವಾಯ, ಹಾಗೆ ಮಾಡುವುದು ಅವಶ್ಯಕ ಅಥವಾ ಯುಕ್ತವೆಂದು ಕಂಡರೆ, ಅಂಥ ನ್ಯಾಸದ ನಿರ್ವಹಣೆ ಅಥವಾ ಆಡಳಿತಕ್ಕಾಗಿ ಒಂದು ಯೋಜನೆಯನ್ನು ರೂಪಿಸಬಹುದು.

(2) ಸಾರ್ವಜನಿಕ ನ್ಯಾಸ ಆಯೋಗವು, ಸೂಕ್ತ ನಿರ್ವಹಣೆ ಅಥವಾ ಆಡಳಿತ ಹಿತದೃಷ್ಟಿಯಿಂದ, ಒಂದು ಸಾಮಾನ್ಯ ಯೋಜನೆಯನ್ನು ರೂಪಿಸುವ ಮೂಲಕ ಎರಡು ಅಥವಾ ಹೆಚ್ಚಿನ ಸಾರ್ವಜನಿಕ ನ್ಯಾಸಗಳನ್ನು ಸಂಯೋಜಿಸಬಹುದೆಂದು ಅಭಿಪ್ರಾಯಪಟ್ಟಲ್ಲಿ ಅದು,–

(ಎ) ಸರ್ಕಾರಿ ರಾಜ್ಯಪತ್ರದಲ್ಲಿ ಮತ್ತು ಅವಶ್ಯವೆನಿಸಿದರೆ, ಸಾರ್ವಜನಿಕ ನ್ಯಾಸ ಆಯೋಗವು ನ್ಯಾಸದಲ್ಲಿ ಹಿತಾಸಕ್ತಿಯನ್ನು ಹೊಂದಿರುವ ವ್ಯಕ್ತಿಗಳ ಗಮನಕ್ಕೆ ತರುವಲ್ಲಿ ಅತ್ಯುತ್ತಮವಾದ ಪತ್ರಿಕೆ ಎಂದು ತಿಳಿದಿರುವ ಹಾಗೂ ನ್ಯಾಸವು ನೋಂದಣಿಯಾದ ಪ್ರದೇಶದಲ್ಲಿ ವ್ಯಾಪಕ ಪ್ರಸಾರದಲ್ಲಿರುವ ಯಾವುದೇ ವೃತ್ತಪತ್ರಿಕೆಯಲ್ಲಿ ನೋಟಿಸನ್ನು ಪ್ರಕಟಿಸಿ; ಮತ್ತು

(ಬಿ) ಅಂಥ ನ್ಯಾಸಗಳ ನ್ಯಾಸಧಾರಿಗಳಿಗೆ ಮತ್ತು ಎಲ್ಲಾ ಇತರ ಆಸಕ್ತಿಯುಳ್ಳ ವ್ಯಕ್ತಿಗಳಿಗೆ ಸುನಾವಣೆ ಮಾಡಲು ಯುಕ್ತ ಅವಕಾಶವನ್ನು ನೀಡಿದ ತರುವಾಯ,

–ಅದಕ್ಕಾಗಿ ಒಂದು ಸಾಮಾನ್ಯ ಯೋಜನೆಯನ್ನು ರೂಪಿಸಬಹುದು.

(3) ಸಾರ್ವಜನಿಕ ನ್ಯಾಸ ಆಯೋಗವು, ಯಾವುದೇ ಸಮಯದಲ್ಲಿ, ನ್ಯಾಸಧಾರಿಗಳನ್ನು ಸುನಾವಣೆ ಮಾಡಿದ ತರುವಾಯ, (1)ನೇ ಉಪ ಪ್ರಕರಣ ಅಥವಾ (2)ನೇ ಉಪ ಪ್ರಕರಣದಡಿಯಲ್ಲಿ ತಾನು ರೂಪಿಸಿದ ಯೋಜನೆಯನ್ನು ಮಾರ್ಪಡಿಸಬಹುದು.

**55. ಸಾರ್ವಜನಿಕ ನ್ಯಾಸದ ಪ್ರಯೋಜನಕ್ಕಾಗಿ ಉಯಿಲಿನ ಮೇರೆಗೆ ಮರಣ ಶಾಸನ ದಾನ.–** (1) ಯಾವುದೇ ಉಯಿಲಿನ ಅಡಿಯಲ್ಲಿ ಒಂದು ಸಾರ್ವಜನಿಕ ನ್ಯಾಸದ ಹೆಸರಿನಲ್ಲಿ ಮರಣ ಶಾಸನ ದಾನವನ್ನು ಮಾಡಿದ್ದಲ್ಲಿ ಅಥವಾ ಮರಣ ಶಾಸನ ದಾನವು ಸಾರ್ವಜನಿಕ ನ್ಯಾಸವನ್ನು ಸೃಜಿಸಿದ್ದಲ್ಲಿ ಅಂಥ ನ್ಯಾಸವನ್ನು ನೋಂದಣಿ ಮಾಡಿಸಿದ್ದಿರಬಹುದಾದ ಅಥವಾ ನೋಂದಣಿ ಮಾಡಿಸಬೇಕಾದ ಉಪ ಸಾರ್ವಜನಿಕ ನ್ಯಾಸ ಆಯುಕ್ತರಿಗೆ ಅದರ ಪ್ರತಿಯನ್ನು ಕಳುಹಿಸಿಕೊಡುವುದು ಉಯಿಲಿನ ನಿರ್ವಾಹಕನ ಕರ್ತವ್ಯವಾಗಿರತಕ್ಕದ್ದು.

(2) ಯಾವುದೇ ಅಂಥ ಉಯಿಲಿನ ಪ್ರೋಬೇಟ್‌ನ್ನು ಅಥವಾ ಅನುಬಂಧಿಸಲಾದ ಅಂಥ ಉಯಿಲಿನ ಆಡಳಿತಾಧಿಕಾರ ಪತ್ರವನ್ನು, ಯಾವುದೇ ನ್ಯಾಯಾಲಯಕ್ಕೆ (1)ನೇ ಉಪ ಪ್ರಕರಣದಲ್ಲಿ ಉಪಬಂಧಿಸಲಾದಂತೆ ಉಪ ಸಾರ್ವಜನಿಕ ನ್ಯಾಸ ಆಯುಕ್ತರಿಗೆ ಅಂಥ ಉಯಿಲಿನ ಒಂದು ಪ್ರತಿಯನ್ನು ಕಳುಹಿಸಲಾಗಿದೆ ಎಂದು ಮನವರಿಕೆಯಾದ ಹೊರತು ಯಾವುದೇ ನ್ಯಾಯಾಲಯವು ನೀಡತಕ್ಕದ್ದಲ್ಲ.

**56. ಧರ್ಮದಾಯ.–** (1)ಯಾವುದೇ ವ್ಯವಹಾರಕ್ಕೆ ಸಂಬಂಧಿಸಿದಂತೆ ಪಕ್ಷಕಾರರ ನಡುವೆ ಯಾವುದೇ ವ್ಯವಹಾರದ ರೂಢಿ ಅಥವಾ ಆಚರಣೆಗನುಸಾರವಾಗಿ ಸದರಿ ವ್ಯವಹಾರದ ಯಾವೊಬ್ಬ ಪಕ್ಷಕಾರನಿಗೆ ಯಾವುದೇ ಮೊಬಲಗನ್ನು ವಿಧಿಸಿದ್ದಲ್ಲಿ ಅಥವಾ ಧರ್ಮಾದಾಯ ಉದ್ದೇಶಕ್ಕಾಗಿ ಬಳಸಲು ಉದ್ದೇಶಿಸಿರುವ ಯಾವುದೇ ಹೆಸರಿನಿಂದ ಕರೆಯಲಾಗುವ ಯಾವುದೇ ಮೊಬಲಗನ್ನು ಸಂಗ್ರಹಿಸಿದ್ದಲ್ಲಿ, ಹಾಗೆ ವಿಧಿಸಿದ ಅಥವಾ ಸಂಗ್ರಹಿಸಿದ (ಈ ಅಧಿನಿಯಮದಲ್ಲಿ "ಧರ್ಮಾದಾಯ" ಎಂದು ಕರೆಯಲಾಗಿದೆ) ಮೊಬಲಗು, ನ್ಯಾಸಧಾರಿಯಾಗಿ ಅದನ್ನು ವಿಧಿಸುವ ಅಥವಾ ಸಂಗ್ರಹಿಸುವ ವ್ಯಕ್ತಿಯಲ್ಲಿ ವಿಹಿತವಾಗತಕ್ಕದ್ದು.

(2) ಮೊತ್ತವನ್ನು ವಿಧಿಸುವ ಅಥವಾ ಸಂಗ್ರಹಿಸುವ ಯಾವೊಬ್ಬ ವ್ಯಕ್ತಿಯು ಸಾಮಾನ್ಯವಾಗಿ ಆತನು ಲೆಕ್ಕಪತ್ರಗಳನ್ನು ಇಟ್ಟಿರುವ ವರ್ಷದ ಮುಕ್ತಾಯದ ದಿನಾಂಕದಿಂದ ಮೂರು ತಿಂಗಳೊಳಗೆ ತನ್ನ ಲೆಕ್ಕಪತ್ರಗಳನ್ನು ನಿಯಮಿಸಬಹುದಾದ ನಮೂನೆಯಲ್ಲಿ ಉಪ ಸಾರ್ವಜನಿಕ ನ್ಯಾಸ ಆಯುಕ್ತರಿಗೆ ಸಲ್ಲಿಸತಕ್ಕದ್ದು.

(3) ಉಪ ಸಾರ್ವಜನಿಕ ನ್ಯಾಸ ಆಯುಕ್ತನು, ಸಲ್ಲಿಸಲಾದ ಲೆಕ್ಕಪತ್ರಗಳ ಸರಿತನದ ಸತ್ಯಾಪನೆಗಾಗಿ ತಾನು ಸೂಕ್ತವೆಂದು ಭಾವಿಸುವಂಥ ವಿಚಾರಣೆಯನ್ನು ಮಾಡಲು ಅಧಿಕಾರ ಹೊಂದಿರತಕ್ಕದ್ದು ಮತ್ತು ನಿಯಮಿಸಲಾದ ರೀತಿಯಲ್ಲಿ ಮೊಬಲಗಿನ ವಿಲೆಗಾಗಿ ಆದೇಶವನ್ನು ಹೊರಡಿಸಬಹುದು.

(4) ಅಧ್ಯಾಯ IV ರ ಉಪಬಂಧಗಳು 'ಧರ್ಮಾದಾಯ' ಕ್ಕೆ ಅನ್ವಯವಾಗತಕ್ಕದ್ದಲ್ಲ.

**57. ಯಥಾ ಸಮೀಪ ಮನವಿ.–** (1) ಸಾರ್ವಜನಿಕ ನ್ಯಾಸ ಆಯೋಗಕ್ಕೆ ಅರ್ಜಿಯನ್ನು ಸಲ್ಲಿಸಿದ್ದರೆ ಅಥವಾ ಅನ್ಯಥಾ ಸಾರ್ವಜನಿಕ ನ್ಯಾಸ ಆಯೋಗವು,–

(ಎ) ಯಾವ ಮೂಲ ಉದ್ದೇಶಕ್ಕಾಗಿ ಸಾರ್ವಜನಿಕ ನ್ಯಾಸವನ್ನು ಸೃಜಿಸಲಾಗಿತ್ತೋ ಆ ಉದ್ದೇಶವು ವಿಫಲವಾಗಿದ್ದರೆ;

(ಬಿ) ಯಾವುದೇ ಸಾರ್ವಜನಿಕ ನ್ಯಾಸದ ಆದಾಯವನ್ನು ಅಥವಾ ನ್ಯಾಸದ ಶಿಲ್ಕನ್ನು ಬಳಸದಿದ್ದರೆ ಅಥವಾ ಬಳಸುವ ಸಂಭವವಿಲ್ಲದಿದ್ದರೆ;

(ಸಿ) ಸಾರ್ವಜನಿಕ ನ್ಯಾಸದ ಸಂಬಂಧದಲ್ಲಿ, ಸಾರ್ವಜನಿಕ ನ್ಯಾಸದ ಕರ್ತನ ಮೂಲ ಆಶಯವನ್ನು, ಅಥವಾ ಯಾವ ಉದ್ದೇಶಕ್ಕಾಗಿ ಸಾರ್ವಜನಿಕ ನ್ಯಾಸವನ್ನು ಸೃಜಿಸಲಾಗಿದೆಯೋ ಆ ಉದ್ದೇಶವನ್ನು, ಪೂರ್ಣವಾಗಿ ಅಥವಾ ಭಾಗಶಃ ನೆರವೇರಿಸುವುದು, ಸಾರ್ವಜನಿಕ ಹಿತಾಸಕ್ತಿಯಾಗಿಲ್ಲವೆಂದು, ಯುಕ್ತ, ಕಾರ್ಯಸಾಧ್ಯ, ಅಪೇಕ್ಷಣೀಯ, ಅಗತ್ಯ ಅಥವಾ ಸೂಕ್ತ ಆಗಿಲ್ಲದಿದ್ದರೆ, ಸಾರ್ವಜನಿಕ ನ್ಯಾಸದ ಸ್ವತ್ತನ್ನು ಅಥವಾ ಆದಾಯವನ್ನು ಅಥವಾ ಯಾವುದೇ ಅದರ ಭಾಗವನ್ನು ಪೂರ್ಣವಾಗಿ ಅಥವಾ ಭಾಗಶ: ಯಾವುದೇ ಇತರ ಧರ್ಮಾದಾಯ ಅಥವಾ ಧಾರ್ಮಿಕ ಉದ್ದೇಶಕ್ಕೆ ವಿನಿಯೋಗಿಸತಕ್ಕದ್ದೆಂದು ಅಭಿಪ್ರಾಯಪಟ್ಟರೆ; ಅಥವಾ

(ಡಿ) ಮೇಲೆ ನಮೂದಿಸಿದ ಯಾವುದೇ ಸಂದರ್ಭದಲ್ಲಿ ಅಥವಾ 54ನೇ ಪ್ರಕರಣದ ಅಡಿಯಲ್ಲಿ ಧಾರಣ ಮಾಡಿದ 'ಧರ್ಮಾದಾಯದ' ಮೊತ್ತದ ವಿನಿಯೋಗದ ಸಂಬಂಧದಲ್ಲಿ,

– ಸಾರ್ವಜನಿಕ ನ್ಯಾಸ ಆಯೋಗವು, ಅಂಥ ಸಾರ್ವಜನಿಕ ನ್ಯಾಸದ ಹಿತಾಸಕ್ತಿಯಲ್ಲಿ ಅವಶ್ಯಕವಾದಂಥ ನಿರ್ದೇಶನವನ್ನು ನೀಡತಕ್ಕದ್ದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ ಅಗತ್ಯಪಡಿಸಲಾದಂತೆ ಅರ್ಜಿ ಸಲ್ಲಿಸಲು ನ್ಯಾಸಧಾರಿಗಳು ವಿಫಲರಾದಲ್ಲಿ ಅಥವಾ ಸಾರ್ವಜನಿಕ ನ್ಯಾಸ ಆಯೋಗವು ಸ್ವತ: ನ್ಯಾಸಧಾರಿಯಾಗಿದ್ದರೆ ಸಾರ್ವಜನಿಕ ನ್ಯಾಸ ಆಯೋಗವು, ಉಚ್ಚ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸತಕ್ಕದ್ದು.

**58. ಸಾರ್ವಜನಿಕ ಧರ್ಮಾದಾಯ ಉದ್ದೇಶವನ್ನು ಬಾಧಿಸುವ ಪ್ರಶ್ನೆಯನ್ನು ಒಳಗೊಳ್ಳುವ ವ್ಯವಹರಣೆಗಳು.–** (1) ಸಾರ್ವಜನಿಕ ಧರ್ಮಾದಾಯ ಉದ್ದೇಶಕ್ಕೆ ಬಾಧಕವಾಗುವ ಯಾವುದೇ ಪ್ರಶ್ನೆಯು ಯಾವುದೇ ದಾವೆ ಅಥವಾ ಕಾನೂನು ವ್ಯವಹರಣೆಗಳಲ್ಲಿ ಒಳಗೊಂಡಿದ್ದರೆ, ನ್ಯಾಯಾಲಯವು ಸಾರ್ವಜನಿಕ ನ್ಯಾಸ ಆಯೋಗಕ್ಕೆ ನೋಟೀಸನ್ನು ಕೊಟ್ಟ ಹೊರತು, ಅಂಥ ಪ್ರಶ್ನೆಯನ್ನು ತೀರ್ಮಾನಿಸಲು ಮುಂದುವರಿಯತಕ್ಕದ್ದಲ್ಲ.

(2) ಅಂಥ ನೋಟೀಸನ್ನು ಸ್ವೀಕರಿಸಿದ ಮೇಲೆ ಅಥವಾ ಅನ್ಯಥಾ ಸಾರ್ವಜನಿಕ ನ್ಯಾಸ ಆಯೋಗವು ಆ ಸಂಬಂಧದಲ್ಲಿ ಯಾವುದೇ ಅರ್ಜಿಯನ್ನು ಸಲ್ಲಿಸಿದರೆ, ಅಂಥ ದಾವೆ ಅಥವಾ ವ್ಯವಹರಣೆಗಳ ಯಾವುದೇ ಹಂತದಲ್ಲಿ ಪಕ್ಷಕಾರನನ್ನು ಸೇರಿಸಿಕೊಳ್ಳತಕ್ಕದ್ದು.

## ಅಧ್ಯಾಯ – IX

## ಸಾರ್ವಜನಿಕ ನ್ಯಾಸಗಳ ಆಡಳಿತ ನಿಧಿ

**59. ಸಾರ್ವಜನಿಕ ನ್ಯಾಸಗಳ ಆಡಳಿತ ನಿಧಿ.–** (1) ಸಾರ್ವಜನಿಕ ನ್ಯಾಸಗಳ ಆಡಳಿಯ ನಿಧಿ ಎಂದು ಕರೆಯಲಾಗುವ ಒಂದು ನಿಧಿಯನ್ನು ಸ್ಥಾಪಿಸತಕ್ಕದ್ದು. ನಿಧಿಯು, ಸಾರ್ವಜನಿಕ ನ್ಯಾಸ ಆಯೋಗದಲ್ಲಿ ನಿಹಿತವಾಗಿರತಕ್ಕದ್ದು.

(2) ಸದರಿ ನಿಧಿಗೆ ಈ ಮುಂದಿನ ಮೊತ್ತಗಳನ್ನು ಜಮೆ ಮಾಡತಕ್ಕದ್ದು, ಎಂದರೆ:–

(ಎ) 17ನೇ ಪ್ರಕರಣದಡಿಯಲ್ಲಿ ವಿಧಿಸಬಹುದಾದ ಫೀಜುಗಳು;

(ಬಿ) 60ನೇ ಪ್ರಕರಣದಡಿಯಲ್ಲಿ ಮಾಡಲಾದ ವಂತಿಗೆಗಳು;

(ಸಿ) 63ನೇ ಪ್ರಕರಣದಡಿಯಲ್ಲಿ ಜಮೆಯಾದ ನಿಧಿಗಳಿಂದ ಮೊಬಲಗು ಅಥವಾ ಅದರ ಭಾಗ;

(ಡಿ) ಖಾಸಗಿ ವ್ಯಕ್ತಿಯಿಂದ ಸ್ವೀಕರಿಸಲಾದ ಯಾವುದೇ ಮೊತ್ತ;

(ಇ) ರಾಜ್ಯ ಸರ್ಕಾರದಿಂದ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರದಿಂದ ಹಂಚಿಕೆಯಾದ ಯಾವುದೇ ಮೊತ್ತ;

(ಎಫ್) ಈ ಅಧಿನಿಯಮದ ಉಪಬಂಧಗಳ ಮೂಲಕ ಅಥವಾ ಅಡಿಯಲ್ಲಿ ಜಮೆ ಮಾಡಬೇಕಾದುದೆಂದು ನಿರ್ದೇಶಿಸಬಹುದಾದ ಯಾವುದೇ ಇತರ ಮೊತ್ತ.

**60. ಸಾರ್ವಜನಿಕ ನ್ಯಾಸಗಳಿಂದ, ಸಾರ್ವಜನಿಕ ನ್ಯಾಸಗಳ ಆಡಳಿತ ನಿಧಿಗೆ ವಂತಿಗೆ.–** (1) ಪ್ರತಿಯೊಂದು ಸಾರ್ವಜನಿಕ ನ್ಯಾಸವು, ಸಾರ್ವಜನಿಕ ನ್ಯಾಸಗಳ ಆಡಳಿತ ನಿಧಿಗೆ, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಲಾದ ಆದೇಶದ ಮೂಲಕ, ರಾಜ್ಯ ಸರ್ಕಾರವು, ಕಾಲಕಾಲಕ್ಕೆ, ಅಧಿಸೂಚಿಸಬಹುದಾದಂತೆ, ಒಟ್ಟು ವಾರ್ಷಿಕ ಆದಾಯದ ಅಥವಾ ಒಟ್ಟು ವಾರ್ಷಿಕ ಸಂಗ್ರಹದ ಅಥವಾ ಸ್ವೀಕೃತಿಯ, ಶೇಕಡಾ ಆರನ್ನು ಮೀರದಂಥ ದರ ಅಥವಾ ದರಗಳಲ್ಲಿ ವಂತಿಗೆಯನ್ನು ವಾರ್ಷಿಕವಾಗಿ ಸಂದಾಯ ಮಾಡತಕ್ಕದ್ದು.

(2) ವಂತಿಗೆಯನ್ನು, ನಿಯಮಿಸಬಹುದಾದಂಥ ದಿನಾಂಕದಂದು ಮತ್ತು ಅಂಥ ವಿಧಾನದಲ್ಲಿ ಸಂದಾಯ ಮಾಡತಕ್ಕದ್ದು.

(3) ಈ ಪ್ರಕರಣದಡಿಯಲ್ಲಿ ಸಂದಾಯ ಮಾಡಬೇಕಾದ ವಂತಿಗೆಯನ್ನು,–

(i) ಧರ್ಮಾದಾಯ ಸಂದರ್ಭದಲ್ಲಿ, ಧರ್ಮಾದಾಯದ ಒಟ್ಟು ವಾರ್ಷಿಕ ಸಂಗ್ರಹಣೆ ಅಥವಾ ಸ್ವೀಕೃತಿಗಳ ಮೇಲಿನ ದರ ಅಥವಾ ದರಗಳಲ್ಲಿ ನಿಗದಿಪಡಿಸತಕ್ಕದ್ದು;

(ii) ಇತರ ಸಾರ್ವಜನಿಕ ನ್ಯಾಸಗಳ ಸಂದರ್ಭದಲ್ಲಿ, ಅಂಥ ಸಾರ್ವಜನಿಕ ನ್ಯಾಸದ ಒಟ್ಟು ವಾರ್ಷಿಕ ಆದಾಯದ ಮೇಲಿನ ದರ ಅಥವಾ ದರಗಳಲ್ಲಿ ನಿಗದಿಪಡಿಸತಕ್ಕದ್ದು.

**ವಿವರಣೆ 1.–** ಈ ಉಪಪ್ರಕರಣದ ಉದ್ದೇಶಗಳಿಗಾಗಿ, "ಒಟ್ಟು ವಾರ್ಷಿಕ ಸಂಗ್ರಹಣೆ ಅಥವಾ ಸ್ವೀಕೃತಿ" ಅಥವಾ "ಒಟ್ಟು ವಾರ್ಷಿಕ ಆದಾಯ"ವು, ಈ ಅಧಿನಿಯಮದ ಅಡಿಯಲ್ಲಿ ನೋಂದಣಿಯಾದ ಇತರ ಧರ್ಮಾದಾಯ ಅಥವಾ ಸಾರ್ವಜನಿಕ ನ್ಯಾಸದಿಂದ ಯಾವುದೇ ಧರ್ಮಾದಾಯ ಅಥವಾ ಸಾರ್ವಜನಿಕ ನ್ಯಾಸದ ಮೂಲಕ ಸ್ವೀಕರಿಸಲಾದ ಯಾವುವೇ ವಂತಿಗೆಗಳನ್ನು ಒಳಗೊಳ್ಳುವುದಿಲ್ಲ.

**ವಿವರಣೆ 2.–** (ಎ) ಈ ಉಪ ಪ್ರಕರಣದ ಉದ್ದೇಶಕ್ಕಾಗಿ "ಒಟ್ಟು ವಾರ್ಷಿಕ ಆದಾಯ" ಎಂದರೆ, ವರ್ಷದಲ್ಲಿ ಎಲ್ಲಾ ಮೂಲಗಳಿಂದ ಒಟ್ಟು ಆದಾಯ (ಎಲ್ಲಾ ವಂತಿಗೆಗಳು ಮತ್ತು ಕಾಣಿಕೆಗಳು ಒಳಗೊಂಡಂತೆ), ಆದರೆ ಸಾರ್ವಜನಿಕ ನ್ಯಾಸದ ಮೂಲನಿಧಿಗೆ ಅದು ಭಾಗವಾಗತಕ್ಕದ್ದೆಂದು ನಿರ್ದಿಷ್ಟ ನಿರ್ದೇಶನದೊಂದಿಗೆ ಯಾವುದೇ ಸಂದಾಯವನ್ನು ಮಾಡಿದ್ದರೆ ಅಥವಾ ಯಾವುದನ್ನಾದರೂ ಕೊಟ್ಟಿದ್ದರೆ, ಅವುಗಳು ಒಳಗೊಳ್ಳುವುದಿಲ್ಲ ಹಾಗೆಯೇ ರಾಜ್ಯ ಸರ್ಕಾರವು, ನಿಯಮಗಳ ಮೂಲಕ ಅನುಮತಿಸಿದ ಯಾವುವೇ ಕಡಿತಗಳೂ ಒಳಗೊಳ್ಳುವುದಿಲ್ಲ:

ಪರಂತು, ಒಟ್ಟು ವಾರ್ಷಿಕ ಆದಾಯವನ್ನು ಲೆಕ್ಕ ಹಾಕುವಾಗ, ಅವುಗಳನ್ನು ನೀಡಿದ ಅಥವಾ ಮಾಡಿದ ಮುಂದಿನ ವರ್ಷಗಳಲ್ಲಿ ಅಂಥ ಸಂದಾಯವನ್ನು ಮಾಡಿದ ಅಥವಾ ವಸ್ತುಗಳನ್ನು ನೀಡಿದುದರಿಂದ ಪ್ರಾಪ್ತವಾದ ಬಡ್ಡಿ ಅಥವಾ ಆದಾಯವನ್ನು ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು;

(ಬಿ) ಒಂದು ಸಾರ್ವಜನಿಕ ನ್ಯಾಸವು, ವ್ಯವಹಾರ ಅಥವಾ ವ್ಯಾಪಾರವನ್ನು ತನ್ನ ಚಟುವಟಿಕೆಗಳಲ್ಲಿ ಒಂದಾಗಿ ನಡೆಸುತ್ತಿದ್ದರೆ, ಆ ಚಟುವಟಿಕೆಗೆ ಸಂಬಂಧಿಸಿದಂತೆ ವಂತಿಗೆಯನ್ನು ಮೌಲ್ಯಮಾಪನ ಮಾಡುವ ಉದ್ದೇಶಕ್ಕಾಗಿ, ಅಂಥ ವ್ಯವಹಾರ ಅಥವಾ ವ್ಯಾಪಾರದ ನಿವ್ವಳ ವಾರ್ಷಿಕ ಲಾಭಗಳನ್ನು, ವ್ಯವಹಾರದ ಅಥವಾ ವ್ಯಾಪಾರದ ಒಟ್ಟು ವಾರ್ಷಿಕ ಆದಾಯವೆಂಬಂತೆ ಪರಿಗಣಿಸತಕ್ಕದ್ದು.

(4) ರಾಜ್ಯ ಸರ್ಕಾರವು, ಪ್ರಗತಿಯ ಉದ್ದೇಶಕ್ಕಾಗಿಯೇ ಮತ್ತು ಶಿಕ್ಷಣದ ಪ್ರಸಾರಕ್ಕಾಗಿ ಅಥವಾ ನೀರಿನ ಸಂರಕ್ಷಣೆಯ ಉದ್ದೇಶಕ್ಕಾಗಿಯೇ ಅಥವಾ ಅರಣ್ಯ, ತೋಟಗಾರಿಕೆ ಅಥವಾ ಕೃಷಿ ಅಭಿವೃದ್ಧಿಯ ಉದ್ದೇಶಕ್ಕಾಗಿಯೇ, ಅಥವಾ ಅನುಸೂಚಿತ ಜಾತಿಗಳು, ಅನುಸೂಚಿತ ಪಂಗಡಗಳು, ಅಧಿಸೂಚನೆಯಿಂದ ಹೊರಗಿಟ್ಟ ಪಂಗಡಗಳು, ಅಲೆಮಾರಿ ಪಂಗಡಗಳು ಅಥವಾ ಮಹಿಳೆಯರ ಕಲ್ಯಾಣದ ಉದ್ದೇಶಕ್ಕಾಗಿಯೇ, ಅಥವಾ ವೈದ್ಯಕೀಯ ಪರಿಹಾರ ಅಥವಾ ಪ್ರಾಣಿಗಳಿಗೆ ಪಶುವೈದ್ಯಕೀಯ ಚಿಕಿತ್ಸೆಯ ಉದ್ದೇಶಕ್ಕಾಗಿಯೇ, ಅಥವಾ ಅಭಾವ, ಬರ, ನೆರೆ, ಬೆಂಕಿ ಅಥವಾ ಇತರ ನೈಸರ್ಗಿಕ ವಿಕೋಪಗಳಿಂದ ಆದ ಆಪತ್ತಿನ ಪರಿಹಾರದ ಉದ್ದೇಶಕ್ಕಾಗಿಯೇ ಇರುವ ಸಾರ್ವಜನಿಕ ನ್ಯಾಸಕ್ಕೆ, ವಂತಿಗೆಯನ್ನು ಸಂದಾಯ ಮಾಡುವುದರಿಂದ ವಿನಾಯಿತಿ ನೀಡಬಹುದು; ಹಾಗೆಯೇ ಒಟ್ಟು ವಾರ್ಷಿಕ ಆದಾಯದ ಭಾಗವಾಗುವ ಯಾವುವೇ ದೇಣಿಗೆಗಳು ಮತ್ತು ಅಭಾವ, ಬರ, ನೆರೆ, ಬೆಂಕಿ ಅಥವಾ ಇತರ ನೈಸರ್ಗಿಕ ವಿಕೋಪದಿಂದ ಆದ ಆಪತ್ತಿನ ಪರಿಹಾರಕ್ಕೆ ವಾಸ್ತವಿಕವಾಗಿ ಖರ್ಚು ಮಾಡಿದ್ದಕ್ಕಾಗಿ, ವಂತಿಗೆಯ ಸಂದಾಯದಿಂದ ವಿನಾಯಿತಿ ನೀಡಬಹುದು.

ನ್ಯಾಸವು ಯಾವುದೇ ವಿನಾಯಿತಿ ನೀಡಲಾದ ವರ್ಗದ ನ್ಯಾಸದಲ್ಲಿ ಸೇರುತ್ತದೆಯೇ ಅಥವಾ ಈ ಉಪ ಪ್ರಕರಣದ ಅಡಿಯಲ್ಲಿ ವಂತಿಗೆಯಿಂದ ವಿನಾಯಿತಿಗೊಳ್ಳುವ ವಂತಿಗೆಯೆಂದು ಅರ್ಹಗೊಳ್ಳುವ ಯಾವುದೇ ವಂತಿಗೆಗಳ ಬಗ್ಗೆ ಯಾವುದೇ ಪ್ರಶ್ನೆಯು ಉದ್ಭವಿಸಿದರೆ, ಆ ಪ್ರಶ್ನೆಯ ಮೇಲೆ ನಿಯಮಿಸಲಾದ ವಿಧಾನದಲ್ಲಿ, ರಾಜ್ಯ ಸರ್ಕಾರದಿಂದ ಪಡೆದ ತೀರ್ಮಾನವು ಅಂತಿಮವಾಗಿರತಕ್ಕದ್ದು.

61. **ವಂತಿಗೆಯನ್ನು ನೀಡಲು ತಪ್ಪಿದ್ದಕ್ಕಾಗಿ ದಂಡಗಳು.–** (1) ಸಾರ್ವಜನಿಕ ನ್ಯಾಸದ ನ್ಯಾಸಧಾರಿಯು (ಸಾರ್ವಜನಿಕ ನ್ಯಾಸ ಆಯೋಗವನ್ನು ಹೊರತುಪಡಿಸಿ) ಅಥವಾ 'ಧರ್ಮದಾಯವನ್ನು' ಚಾರ್ಜು ಮಾಡುವ ಅಥವಾ ಸಂಗ್ರಹಿಸುವ ವ್ಯಕ್ತಿಗಳು, 60ನೇ ಪ್ರಕರಣದಡಿಯಲ್ಲಿ ವಂತಿಗೆಯನ್ನು ಸಂದಾಯ ಮಾಡಲು ತಪ್ಪಿದಲ್ಲಿ, 64ನೇ ಪ್ರಕರಣದಲ್ಲಿ ಉಪಬಂಧಿಸಲಾದ ದಂಡಗಳಿಗೆ ಅವನು ಹೊಣೆಗಾರನಾಗತಕ್ಕದ್ದು.

(2) ಸಾರ್ವಜನಿಕ ನ್ಯಾಸಕ್ಕೆ ಸೇರಿದ ಯಾವುದೇ ಹಣವನ್ನು ಠೇವಣಿ ಇಟ್ಟಿರುವ ಬ್ಯಾಂಕು ಅಥವಾ ಯಾವೊಬ್ಬ ವ್ಯಕ್ತಿಗೆ, ಸಾರ್ವಜನಿಕ ನ್ಯಾಸದ ಹೆಸರಿನಲ್ಲಿ ಜಮೆಯಿರುವ ಅಥವಾ ಅಂಥ ವ್ಯಕ್ತಿಯ ಬಳಿಯಲ್ಲಿರಬಹುದಾದ ಅಥವಾ ಅಂಥ ಬ್ಯಾಂಕು ಅಥವಾ ವ್ಯಕ್ತಿಯಿಂದ ಠೇವಣಿಯ ರೀತಿಯಲ್ಲಿ ಸಾರ್ವಜನಿಕ ನ್ಯಾಸದಿಂದ ಅಥವಾ ಅದರ ಪರವಾಗಿ ಕಾಲಕಾಲಕ್ಕೆ ವಸೂಲು ಮಾಡಲಾದ ವಂತಿಗೆಯನ್ನು ಸಂದಾಯ ಮಾಡುವಂತೆ ನಿರ್ದೇಶಿಸುವ ಆದೇಶವನ್ನೂ ಸಾರ್ವಜನಿಕ ನ್ಯಾಸ ಆಯೋಗವು ಮಾಡಬಹುದು ಮತ್ತು ಅಂಥ ಬ್ಯಾಂಕು ಅಥವಾ ವ್ಯಕ್ತಿಯು, ಅಂಥ ಆದೇಶವನ್ನು ಪಾಲಿಸುವುದಕ್ಕೆ ಬದ್ಧರಾಗಿರತಕ್ಕದ್ದು. ಅಂಥ ಆದೇಶಕ್ಕೆ ಅನುಸಾರವಾಗಿ ಮಾಡಿದ ಪ್ರತಿಯೊಂದು ಸಂದಾಯವು, ಬ್ಯಾಂಕು ಅಥವಾ ವ್ಯಕ್ತಿಯೊಂದಿಗೆ ಹಾಗೆ ಠೇವಣಿ ಇಡಲಾದ ಸಾರ್ವಜನಿಕ ನ್ಯಾಸಕ್ಕೆ ಸೇರಿದ ಹಣದಿಂದ, ಅದರಿಂದ ಅಥವಾ ಆತನಿಂದ ಹಾಗೆ ಸಂದಾಯ ಮಾಡಲಾದ ಯಾವುದೇ ಮೊತ್ತ ಅಥವಾ ಮೊತ್ತಗಳ ಸಂಬಂಧದಲ್ಲಿ, ಸಾರ್ವಜನಿಕ ನ್ಯಾಸದ ಎಲ್ಲಾ ಹೊಣೆಗಾರಿಕೆಯಿಂದ ಅಂಥ ಬ್ಯಾಂಕು ಅಥವಾ ವ್ಯಕ್ತಿಗೆ ಪರ್ಯಾಪ್ತ ವಿಮೋಚನೆಯಾಗಿರತಕ್ಕದ್ದು.

(3) (2)ನೇ ಉಪಪ್ರಕರಣದ ಅಡಿಯಲ್ಲಿ ಸಂದಾಯ ಮಾಡುವಂತೆ ಆದೇಶಿಸಲ್ಪಟ್ಟ ಯಾವುದೇ ಬ್ಯಾಂಕು ಅಥವಾ ವ್ಯಕ್ತಿಯು, ರಾಜ್ಯ ಸರ್ಕಾರಕ್ಕೆ ಅಪೀಲು ಸಲ್ಲಿಸಬಹುದು ಮತ್ತು ರಾಜ್ಯ ಸರ್ಕಾರವು, ತಾನು ಸೂಕ್ತವೆಂದು ಭಾವಿಸಬಹುದಾದಂಥ ವಿಚಾರಣೆಯನ್ನು ಮಾಡಿದ ತರುವಾಯ, ಅಂಥ ಆದೇಶವನ್ನು ಸ್ಥಿರೀಕರಿಸಬಹುದು, ಮಾರ್ಪಾಟು ಮಾಡಬಹುದು ಅಥವಾ ರದ್ದುಗೊಳಿಸಬಹುದು.

**62. ಸಾರ್ವಜನಿಕ ನ್ಯಾಸಗಳ ಆಡಳಿತ ನಿಧಿಯ ವಿನಿಯೋಗ.–** (1) ಸಾರ್ವಜನಿಕ ನ್ಯಾಸಗಳ ಆಡಳಿತ ನಿಧಿಯು, ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು ಮತ್ತು ರಾಜ್ಯ ಸರ್ಕಾರದ ಸಾಮಾನ್ಯ ಅಥವಾ ವಿಶೇಷ ಆದೇಶಕ್ಕೆ ಒಳಪಟ್ಟು, ಸಾರ್ವಜನಿಕ ನ್ಯಾಸಗಳ ವಿನಿಯಮಗಳಿಗೆ ಆನುಷಂಗಿಕವಾದ ವೆಚ್ಚಗಳಿಗೆ ಚಾರ್ಜುಗಳ ಸಂದಾಯಕ್ಕಾಗಿ ಮತ್ತು ಸಾಮಾನ್ಯವಾಗಿ ಈ ಅಧಿನಿಯಮದ ಉಪಬಂಧಗಳನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸುವುದಕ್ಕಾಗಿ ವಿನಿಯೋಗವಾಗತಕ್ಕದ್ದು.

(2) ಸಾರ್ವಜನಿಕ ನ್ಯಾಸಗಳ ಆಡಳಿತ ನಿಧಿಗೆ ಜಮೆಯಾಗುವ ಹಣದ ಅಭಿರಕ್ಷೆ ಮತ್ತು ಹೂಡಿಕೆ ಹಾಗೂ ಅದರಿಂದ ಬಟವಾಡೆ ಮತ್ತು ಸಂದಾಯವನ್ನು ನಿಯಮಿಸಲಾದ ವಿಧಾನದಲ್ಲಿ ನಿಯಂತ್ರಿಸತಕ್ಕದ್ದು ಮತ್ತು ಮಾಡತಕ್ಕದ್ದು.

**63. ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಸಾರ್ವಜನಿಕ ನ್ಯಾಸ ಆಡಳಿತ ನಿಧಿಗೆ ನಿಧಿಗಳನ್ನು ಜಮೆ ಮಾಡಲು ರಾಜ್ಯಸರ್ಕಾರದ ನಿರ್ದೇಶನ.–** ಈ ಅಧಿನಿಯಮವನ್ನು, ನಿರಸಿತಗೊಂಡ ಯಾವುದೇ ಅಧಿನಿಯಮದ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಅಡಿಯಲ್ಲಿ ನೋಂದಾಯಿತವಾಗಿದ್ದಿರಬಹುದಾದ, ಯಾವುದೇ ಸಾರ್ವಜನಿಕ ನ್ಯಾಸಕ್ಕೆ ಅಥವಾ ಸಾರ್ವಜನಿಕ ನ್ಯಾಸದ ವರ್ಗಕ್ಕೆ ಅನ್ವಯಿಸಿದಾಗ, ಸಾರ್ವಜನಿಕ ನ್ಯಾಸ ಆಯೋಗವು ಯಾವುದೇ ಅಂಥ ಅಧಿನಿಯಮದ ಅಡಿಯಲ್ಲಿ ಬಾಕಿಯಾಗಿ ಉಳಿದಿರುವ ಮೊಬಲಗನ್ನು ವಸೂಲು ಮಾಡತಕ್ಕದ್ದೆಂದು ಮತ್ತು ಆ ಮೊಬಲಗನ್ನು ಸಾರ್ವಜನಿಕ ನ್ಯಾಸ ಆಡಳಿತ ನಿಧಿಗೆ ಜಮೆ ಮಾಡತಕ್ಕದ್ದೆಂದು, ರಾಜ್ಯ ಸರ್ಕಾರವು ನಿರ್ದೇಶಿಸಬಹುದು.

## ಅಧ್ಯಾಯ – X

## ಅಪರಾಧಗಳು ಮತ್ತು ದಂಡಗಳು

**64. ದಂಡಗಳು.–** ಈ ಅಧಿನಿಯಮದ ಯಾವುವೇ ಉಪಬಂಧಗಳನ್ನು ಉಲ್ಲಂಘಿಸಿದ ಯಾವೊಬ್ಬ ಯಾವೊಬ್ಬ ನ್ಯಾಸಧಾರಿಯು ಅಥವಾ ಯಾವೊಬ್ಬ ವ್ಯಕ್ತಿಯು, ಈ ಮುಂದೆ ನಿರ್ದಿಷ್ಟಪಡಿಸಿದ ಕೋಷ್ಠಕದ ಮೂರನೇ ಅಂಕಣದಲ್ಲಿ ನಮೂದಿಸಿರುವ ಮೊಬಲಗಿನೊಂದಿಗೆ ಅಂಥ ಪ್ರತಿಯೊಂದು ಅಪರಾಧಕ್ಕೆ ಸಂಬಂಧಿಸಿದಂತೆ ದಂಡಿತನಾಗತಕ್ಕದ್ದು.

**ಕೋಷ್ಟಕ**

| ಪ್ರಕರಣ | ವಿಷಯ | ವಿಧಿಸಬಹುದಾದ ದಂಡ |
|---|---|---|
| (1) | (2) | (3) |
| 17ನೇ ಪ್ರಕರಣ (1) ಮತ್ತು (4)ನೇ ಉಪಪ್ರಕರಣಗಳು | ಸಾರ್ವಜನಿಕ ನ್ಯಾಸದ ನೋಂದಣಿಗಾಗಿ ಅವಧಿಯೊಳಗೆ ಉಪ ಸಾರ್ವಜನಿಕ ನ್ಯಾಸ ಆಯುಕ್ತನಿಗೆ ಅರ್ಜಿಯನ್ನು ಹಾಕಿಕೊಳ್ಳುವುದು ನ್ಯಾಸಧಾರಿಯ ಕರ್ತವ್ಯ | ರೂ.2000 |
| 17ನೇ ಪ್ರಕರಣ (6) ನೇ ಉಪಪ್ರಕರಣ | ಕೆಲವು ಅಧಿಕಾರಿಗಳು ಮತ್ತು ಪ್ರಾಧಿಕಾರಿಗಳಿಗೆ ಸ್ಥಿರ ಮತ್ತು ಚರಸ್ವತ್ತುಗಳ ಜ್ಞಾಪನವನ್ನು ಅವಧಿಯೊಳಗೆ ಕಳುಹಿಸುವುದು ನ್ಯಾಸಧಾರಿಯ ಕರ್ತವ್ಯ. | ರೂ.1000 |
| 21ನೇ ಪ್ರಕರಣ | ಬದಲಾವಣೆಯನ್ನು ವರದಿ ಮಾಡುವಲ್ಲಿ ತಪ್ಪುವುದು | ರೂ.2000 |
| 23ನೇ ಪ್ರಕರಣ | ಉಪಬಂಧಿಸಿದ ಅವಧಿಯೊಳಗೆ ಅರ್ಜಿಯನ್ನು ಸಲ್ಲಿಸುವುದಕ್ಕೆ ತಪ್ಪುವುದು | ರೂ.1000 |

| ಪ್ರಕರಣ | ವಿಷಯ | ವಿಧಿಸಬಹುದಾದ ದಂಡ |
|---|---|---|
| (1) | (2) | (3) |
| 23ನೇ ಪ್ರಕರಣ | ಉಪಬಂಧಿಸಿದ ಅವಧಿಯೊಳಗೆ ಜ್ಞಾಪನವನ್ನು ಕಳುಹಿಸುವುದಕ್ಕೆ ತಪ್ಪುವುದು | ರೂ.200 |
| 29ನೇ ಪ್ರಕರಣ | ಉಪಬಂಧಿಸಿದ ಅವಧಿಯೊಳಗೆ ಸಾರ್ವಜನಿಕ ನ್ಯಾಸದ ನೋಂದಣಿಗಾಗಿ ಅರ್ಜಿ ಸಲ್ಲಿಸುವುದು ನಿರ್ವಾಹಕನ ಕರ್ತವ್ಯ | ರೂ.2000 |
| 33ನೇ ಪ್ರಕರಣ | ಕ್ರಮಬದ್ಧ ಲೆಕ್ಕಪತ್ರಗಳನ್ನು ಇಡುವುದು ಕರ್ತವ್ಯ | ರೂ.2000 |
| 37ನೇ ಪ್ರಕರಣ | ಕ್ರಮಬದ್ಧ ಭದ್ರತೆಗಳಲ್ಲಿ ಹಣವನ್ನು ಹೂಡುವುದಕ್ಕೆ ತಪ್ಪುವುದು ಅಥವಾ ಬಿಟ್ಟುಬಿಡುವುದು | ರೂ.2000 |
| 46ನೇ ಪ್ರಕರಣ | ಈ ಪ್ರಕರಣದಡಿಯಲ್ಲಿ ಹೊರಡಿಸಲಾದ ಯಾವುದೇ ನಿರ್ದೇಶನಗಳನ್ನು ಯುಕ್ತ ಕಾರಣವಿಲ್ಲದೇ ಪಾಲಿಸುವುದಕ್ಕೆ ವಿಫಲನಾಗುವುದು | ರೂ.4000 |
| 61ನೇ ಪ್ರಕರಣ | ನ್ಯಾಸಧಾರಿ (ಸಾರ್ವಜನಿಕ ನ್ಯಾಸ ಆಯೋಗವನ್ನು ಹೊರತುಪಡಿಸಿ) ಅಥವಾ ಧರ್ಮದಾಯ ವನ್ನು ಚಾರ್ಜು ಮಾಡುವ ಅಥವಾ ಸಂಗ್ರಹ ಮಾಡುವ ವ್ಯಕ್ತಿಗಳು 60ನೇ ಪ್ರಕರಣದಡಿಯಲ್ಲಿ ವಂತಿಗೆಯನ್ನು ಪಾವತಿಸುವುದಕ್ಕೆ ವಿಫಲನಾದಲ್ಲಿ. | ರೂ.2000 |

**65. ಇತರ ಅಪರಾಧಗಳು.–** ಈ ಅಧಿನಿಯಮದಲ್ಲಿನ ಉಪಬಂಧಗಳನ್ನು ಅಥವಾ ಯಾವುದೇ ನಿರ್ದಿಷ್ಟ ದಂಡವನ್ನು ಉಪಬಂಧಿಸಿಲ್ಲದ ನಿಯಮಗಳನ್ನು ಯಾರೊಬ್ಬರು ಉಲ್ಲಂಘಿಸಿದರೆ ಅಥವಾ ಈ ಅಧಿನಿಯಮದ ಯಾವುವೇ ಉಪಬಂಧಗಳಡಿಯಲ್ಲಿ ಸಾರ್ವಜನಿಕ ನ್ಯಾಸ ಆಯೋಗವು, ಉಪ ಸಾರ್ವಜನಿಕ ನ್ಯಾಸ ಆಯುಕ್ತರು ಹೊರಡಿಸಿದ ಆದೇಶ ಅಥವಾ ಮಾಡಲಾದ ನಿರ್ದೇಶನವನ್ನು ಪಾಲಿಸಲು ಯಾವುದೇ ಯುಕ್ತ ಕಾರಣವಿಲ್ಲದೇ ವಿಫಲನಾದಲ್ಲಿ, ಅಪರಾಧ ನಿರ್ಣಯವಾದಾಗ, ಐದು ಸಾವಿರ ರೂಪಾಯಿಗಳಿಗೆ ವಿಸ್ತರಿಸಬಹುದಾದ ದಂಡದೊಂದಿಗೆ ಶಿಕ್ಷಿಸಲ್ಪಡತಕ್ಕದ್ದು.

## ಅಧ್ಯಾಯ – XI

## ಸಾರ್ವಜನಿಕ ನ್ಯಾಸ ಆಯೋಗದ ಪ್ರಕಾರ್ಯಗಳು, ಪ್ರಕ್ರಿಯೆ, ಅಧಿಕಾರ ವ್ಯಾಪ್ತಿ ಮತ್ತು ಅಪೀಲುಗಳು

66. **ಉಪ ಸಾರ್ವಜನಿಕ ನ್ಯಾಸ ಆಯುಕ್ತರ ನಿರ್ಣಯಗಳಿಂದ ಅಪೀಲುಗಳು.–** (1) ಈ ಮುಂದಿನ ಪ್ರಕರಣಗಳಲ್ಲಿ ಉಪ ಸಾರ್ವಜನಿಕ ನ್ಯಾಸ ಆಯುಕ್ತರ ನಿರ್ಣಯಗಳ ಅಥವಾ ಆದೇಶದ ವಿರುದ್ಧ ಸಾರ್ವಜನಿಕ ನ್ಯಾಸ ಆಯೋಗಕ್ಕೆ ಅಪೀಲನ್ನು ಸಲ್ಲಿಸಬಹುದು–

(ಎ) 19ನೇ ಪ್ರಕರಣದ ಅಡಿಯಲ್ಲಿ ನಿರ್ಣಯ ಮತ್ತು ಆದೇಶ ಯಾವುದಾದರೂ ಇದ್ದರೆ;

(ಬಿ) 21ನೇ ಪ್ರಕರಣದ ಅಡಿಯಲ್ಲಿ ನಿರ್ಣಯ;

(ಸಿ) 22ನೇ ಪ್ರಕರಣದ ಅಡಿಯಲ್ಲಿ ನಿರ್ಣಯ;

(ಡಿ) 27ನೇ ಪ್ರಕರಣದ ಅಡಿಯಲ್ಲಿ ನಿರ್ಣಯ;

(ಇ) 56ನೇ ಪ್ರಕರಣದ (3) ಉಪ ಪ್ರಕರಣದ ಅಡಿಯಲ್ಲಿ ಆದೇಶ;

(2) ನಿರ್ಣಯವನ್ನು ದಾಖಲು ಮಾಡಿದ ಅಥವಾ ಸಂದರ್ಭಾನುಸಾರ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಅರವತ್ತು ದಿನಗಳು ಮುಕ್ತಾಯವಾದ ತರುವಾಯ ಯಾವುದೇ ಅಪೀಲನ್ನು ಪುರಸ್ಕರಿಸತಕ್ಕದ್ದಲ್ಲ.

(3) ಸಾರ್ವಜನಿಕ ನ್ಯಾಸ ಆಯೋಗವು, ಅಪೀಲುದಾರನ ಅಥವಾ ಆತನ ಪರವಾಗಿ ಹಾಜರಾಗುವ ಯಾವೊಬ್ಬ ವ್ಯಕ್ತಿಯ ವಿಚಾರಣೆ ಮಾಡಿದ ತರುವಾಯ, ಕಾರಣಗಳನ್ನು ಲಿಖಿತವಾಗಿ ದಾಖಲು ಮಾಡಿ ಯಾವುದರ ವಿರುದ್ಧ ಅಪೀಲು ಮಾಡಲಾಗಿದೆಯೋ ಅಂಥ ನಿರ್ಣಯವನ್ನು ಅಥವಾ ಆದೇಶವನ್ನು ರದ್ದುಪಡಿಸಬಹುದು, ವಿಪರ್ಯಯಗೊಳಿಸಬಹುದು, ಮಾರ್ಪಾಡು ಮಾಡಬಹುದು ಅಥವಾ ಸ್ಥಿರೀಕರಿಸಬಹುದು ಅಥವಾ ಹೆಚ್ಚಿನ ವಿಚಾರಣೆ ಮಾಡುವುದಕ್ಕಾಗಿ ಅಥವಾ ಆತನು ಅವಶ್ಯವೆಂದು ಭಾವಿಸಬಹುದಾದ ಅಂಥ ಹೆಚ್ಚಿನ ಸಾಕ್ಷ್ಯವನ್ನು ತೆಗೆದುಕೊಳ್ಳುವುದಕ್ಕಾಗಿ ಉಪ ಸಾರ್ವಜನಿಕ ನ್ಯಾಸ ಆಯುಕ್ತನಿಗೆ ನಿರ್ದೇಶಿಸಬಹುದು ಅಥವಾ ಸ್ವತ: ತಾನೇ ಅಂಥ ಹೆಚ್ಚಿನ ಸಾಕ್ಷ್ಯವನ್ನು ತೆಗೆದುಕೊಳ್ಳಬಹುದು.

**67. ಉಪ ಸಾರ್ವಜನಿಕ ನ್ಯಾಸ ಆಯುಕ್ತರ ಮುಂದಿರುವ ದಾಖಲೆಗಳನ್ನು ಮತ್ತು ವ್ಯವಹರಣೆಗಳನ್ನು ಸಾರ್ವಜನಿಕ ನ್ಯಾಸ ಆಯೋಗವು ತರಿಸಿಕೊಳ್ಳುವುದು ಮತ್ತು ಪರೀಕ್ಷಿಸುವುದು.–** (1) 66ನೇ ಪ್ರಕರಣದಲ್ಲಿ ನಮೂದಿಸಲಾದ ಯಾವುವೇ ಪ್ರಕರಣಗಳಲ್ಲಿ ಸಾರ್ವಜನಿಕ ನ್ಯಾಸ ಆಯೋಗವು, ಸ್ವತ: ತಾನಾಗಿಯೇ ಆಗಲಿ ಅಥವಾ ಅರ್ಜಿಯ ಮೇಲಾಗಲಿ, ಉಪ ಸಾರ್ವಜನಿಕ ನ್ಯಾಸ ಆಯುಕ್ತನು ದಾಖಲು ಮಾಡಿದ ಅಥವಾ ಹೊರಡಿಸಿದ ಯಾವುದೇ ನಿರ್ಣಯ ಅಥವಾ ಆದೇಶದ ಸರಿತನದ ಬಗ್ಗೆ ಸ್ವತ: ಮನವರಿಕೆ ಮಾಡಿಕೊಳ್ಳುವ ಉದ್ದೇಶಕ್ಕಾಗಿ ಉಪ ಸಾರ್ವಜನಿಕ ನ್ಯಾಸ ಆಯುಕ್ತನ ಮುಂದಿರುವ ಅಂಥ ಪ್ರಕರಣಗಳ ದಾಖಲೆ ಅಥವಾ ವ್ಯವಹರಣೆಗಳನ್ನು ತರಿಸಿಕೊಳ್ಳಬಹುದು ಮತ್ತು ಪರೀಕ್ಷಿಸಬಹುದು ಹಾಗೂ ಸದರಿ ನಿರ್ಣಯ ಅಥವಾ ಆದೇಶವನ್ನು ರದ್ದುಪಡಿಸಬಹುದು ಮತ್ತು ವಿಪರ್ಯಯಗೊಳಿಸಬಹುದು, ಮಾರ್ಪಾಡು ಮಾಡಬಹುದು ಅಥವಾ ಸ್ಥಿರೀಕರಿಸಬಹುದು ಅಥವಾ ಹೆಚ್ಚಿನ ವಿಚಾರಣೆ ಮಾಡುವುದಕ್ಕಾಗಿ ಅಥವಾ ಅವಶ್ಯವೆಂದು ಭಾವಿಸಬಹುದಾದ ಅಂಥ ಹೆಚ್ಚಿನ ಸಾಕ್ಷ್ಯವನ್ನು ತೆಗೆದುಕೊಳ್ಳುವುದಕ್ಕಾಗಿ ಉಪ ಸಾರ್ವಜನಿಕ ನ್ಯಾಸ ಆಯುಕ್ತನಿಗೆ ನಿರ್ದೇಶಿಸಬಹುದು ಅಥವಾ ಸ್ವತ: ತಾನೇ ಅಂಥ ಸಾಕ್ಷ್ಯವನ್ನು ತೆಗೆದುಕೊಳ್ಳಬಹುದು:

ಪರಂತು, ಸಾರ್ವಜನಿಕ ನ್ಯಾಸ ಆಯೋಗವು, ಯಾವುದೇ ಆದೇಶವನ್ನು ಅದರಿಂದ ಬಾಧಿತನಾಗುವ ಪಕ್ಷಕಾರನಿಗೆ ಅಹವಾಲನ್ನು ಹೇಳಿಕೊಳ್ಳಲು ಅವಕಾಶ ನೀಡದೆ ದಾಖಲಿಸತಕ್ಕದ್ದಲ್ಲ ಅಥವಾ ಹೊರಡಿಸತಕ್ಕದ್ದಲ್ಲ.

(2) (1)ನೇ ಉಪ ಪ್ರಕರಣದಲ್ಲಿ ಇರುವುದು ಯಾವುದೂ,

(ಎ) ಉಪ ಸಾರ್ವಜನಿಕ ನ್ಯಾಸ ಆಯುಕ್ತನು ದಾಖಲಿಸಿದ ಯಾವುದೇ ನಿರ್ಣಯದ ವಿರುದ್ಧ 66ನೇ ಪ್ರಕರಣದಡಿಯಲ್ಲಿ ಅಪೀಲು ಇತ್ಯರ್ಥದಲ್ಲಿರುವ ಅವಧಿಯಲ್ಲಿ ಅಂಥ ಪ್ರಕರಣದಲ್ಲಿ; ಅಥವಾ

(ಬಿ) 66ನೇ ಪ್ರಕರಣದ ಅಡಿಯಲ್ಲಿಯ ಅಪೀಲಿನಲ್ಲಿ ಹೊರಡಿಸಿದ ಆದೇಶದ ಸಂಬಂಧದಲ್ಲಿ,

– ದಾಖಲೆಯನ್ನು ತರಿಸಿಕೊಳ್ಳುವುದಕ್ಕೆ ಮತ್ತು ಪರೀಕ್ಷಿಸುವುದಕ್ಕೆ ಸಾರ್ವಜನಿಕ ನ್ಯಾಸ ಆಯೋಗವು ಹಕ್ಕುಳ್ಳವನಾಗಿರತಕ್ಕದ್ದಲ್ಲ.

**68. ಯಾವುದೇ ನ್ಯಾಯಾಲಯ, ನ್ಯಾಯಾಧಿಕರಣದ ಮುಂದೆ ಇತ್ಯರ್ಥದಲ್ಲಿರುವ ಪ್ರಕರಣಗಳ ವರ್ಗಾವಣೆ.–** ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಂದು ಯಾವುದೇ ನ್ಯಾಯಾಲಯ, ನ್ಯಾಯಾಧಿಕರಣ, ಪ್ರಾಧಿಕರದ ಮುಂದೆ ಇತ್ಯರ್ಥದಲ್ಲಿರುವ ಎಲ್ಲಾ ಪ್ರಕರಣಗಳು, ಸಾರ್ವಜನಿಕ ನ್ಯಾಸ ಆಯೋಗದ ಮುಂದೆ ಅಂಥ ಎಲ್ಲಾ ಪ್ರಕರಣಗಳು ದಾಖಲಾಗಿದ್ದರೆ ಹೇಗೋ ಹಾಗೇ ವರ್ಗಾವಣೆಯಾಗತಕ್ಕದ್ದು. ಸಾರ್ವಜನಿಕ ನ್ಯಾಸ ಆಯೋಗವು, ಅದರ ಸುನಾವಣೆ ಮಾಡಿ ಸೂಕ್ತ ಆದೇಶಗಳನ್ನು ಹೊರಡಿಸತಕ್ಕದ್ದು.

**69. ಸರ್ಕಾರದಿಂದ ಪುನರೀಕ್ಷಣೆ.–** ರಾಜ್ಯ ಸರ್ಕಾರವು, ಸಾರ್ವಜನಿಕ ನ್ಯಾಸ ಆಯೋಗವು ಹೊರಡಿಸಿದ ಯಾವುದೇ ವ್ಯವಹರಣೆ, ಅಥವಾ ಆದೇಶದ ದಾಖಲೆಗಳನ್ನು, ಯಾವುದೇ ಆದೇಶ ಅಥವಾ ವ್ಯವಹರಣೆಗಳ ಸರಿತನ, ಕಾನೂನು ಸಮ್ಮತತೆ ಅಥವಾ ಔಚಿತ್ಯವನ್ನು ತಾನು ಮನದಟ್ಟು ಮಾಡಿಕೊಳ್ಳುವ ಉದ್ದೇಶಕ್ಕಾಗಿ, ಪರೀಕ್ಷಿಸುವುದಕ್ಕಾಗಿ ತರಿಸಿಕೊಳ್ಳಬಹುದು ಮತ್ತು ಬಾಧಿತ ವ್ಯಕ್ತಿಗಳಿಗೆ ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ನೀಡಿದ ತರುವಾಯ ಅದರ ಬಗ್ಗೆ ಸೂಕ್ತವೆಂದು ಭಾವಿಸಲಾದ ಆದೇಶವನ್ನು ಹೊರಡಿಸಬಹುದು.

**70. ವಿಚಾರಣೆ ನಡೆಸುವ ಅಧಿಕಾರಿಗಳು ಸಿವಿಲ್ ನ್ಯಾಯಾಲಯದ ಅಧಿಕಾರಗಳನ್ನು ಹೊಂದಿರುವುದು.–** ಈ ಅಧಿನಿಯಮದ ಅಡಿಯಲ್ಲಿ ವಿಚಾರಣೆ ನಡೆಸುವಲ್ಲಿ, ಅದನ್ನು ನಡೆಸುವ ಅಧಿಕಾರಿಯು, ಈ ಮುಂದಿನ ವಿಷಯಗಳ ಸಂಬಂಧದಲ್ಲಿ ಸಿವಿಲ್ ಪ್ರಕ್ರಿಯಾ ಸಂಹಿತೆ 1908ರ ಅಡಿಯಲ್ಲಿ ದಾವೆಯ ಅಧಿವಿಚಾರಣೆಯಲ್ಲಿ ನ್ಯಾಯಾಲಯಗಳಲ್ಲಿ ನಿಹಿತವಾದ ಅಧಿಕಾರಗಳನ್ನೇ ಹೊಂದಿರತಕ್ಕದ್ದು ಎಂದರೆ,–

(ಎ) ಅಫಿದಾವಿತ್‌ಗಳ ಮೂಲಕ ವಾಸ್ತವಾಂಶಗಳ ರುಜುವಾತು;

(ಬಿ) ಯಾವೊಬ್ಬ ವ್ಯಕ್ತಿಯನ್ನು ಸಮನ್ ಮಾಡುವುದು ಮತ್ತು ಹಾಜರಾತಿಯನ್ನು ಒತ್ತಾಯಿಸುವುದು ಹಾಗೂ ಆತನನ್ನು ಪ್ರಮಾಣದ ಮೇಲೆ ಪರೀಕ್ಷಿಸುವುದು;

(ಸಿ) ಶೋಧನೆಗೆ ಮತ್ತು ಪರಿಶೀಲಿಸುವುದಕ್ಕೆ ಆದೇಶಿಸುವುದು ಮತ್ತು ದಸ್ತಾವೇಜುಗಳನ್ನು ಹಾಜರು ಪಡಿಸುವುದಕ್ಕೆ ಒತ್ತಾಯಪಡಿಸುವುದು;

(ಡಿ) ಕಮೀಷನ್‌ಗಳನ್ನು ಹೊರಡಿಸುವುದು.

**71. ವ್ಯವಹರಣೆಗಳಿಗೆ ಪಕ್ಷಕಾರರಾಗಿ ಸೇರಿಸುವುದಕ್ಕೆ ವಿಚಾರಣಾಧಿಕಾರಿಯ ಅಧಿಕಾರ.–** ಈ ಅಧಿನಿಯಮದ ಅಡಿಯಲ್ಲಿಯ ಯಾವುವೇ ವ್ಯವಹರಣೆಗಳಲ್ಲಿ, ಸಾರ್ವಜನಿಕ ನ್ಯಾಸದಲ್ಲಿ ಹಿತಾಸಕ್ತಿಯಿರುವ ಯಾವೊಬ್ಬ ವ್ಯಕ್ತಿಯನ್ನು, ವಿಚಾರಣೆ ಅಂಥ ವ್ಯಕ್ತಿಯು ಅರ್ಜಿಯನ್ನು ಸಲ್ಲಿಸಿದ ತರುವಾಯ ನಡೆಸುವ ಅಧಿಕಾರಿಯು ಆದೇಶಿಸಬಹುದಾದಂತೆ, ಅಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ, ಅಂಥ ವ್ಯವಹರಣೆಗೆ ಪಕ್ಷಕಾರನನ್ನಾಗಿ ಸೇರಿಸಿಕೊಳ್ಳಬಹುದು.

**72. ವಿಚಾರಣೆಗಳು ನ್ಯಾಯಿಕ ವಿಚಾರಣೆಗಳಾಗಿರುವವು.–** ಈ ಅಧಿನಿಯಮದ ಅಡಿಯಲ್ಲಿಯ ಎಲ್ಲಾ ವಿಚಾರಣೆಗಳು ಮತ್ತು ಅಪೀಲುಗಳು, ಭಾರತ ದಂಡ ಸಂಹಿತೆಯ 193, 219 ಮತ್ತು 228ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ನ್ಯಾಯಿಕ ವ್ಯವಹರಣೆಗಳಾಗಿವೆಂದು ಭಾವಿಸತಕ್ಕದ್ದು.

**73. ಸಾರ್ವಜನಿಕ ನ್ಯಾಸ ಆಯೋಗ, ಉಪ ಸಾರ್ವಜನಿಕ ನ್ಯಾಸ ಆಯುಕ್ತ ಮುಂತಾದವರು ದಂಡ ಪ್ರಕ್ರಿಯಾ ಸಂಹಿತೆ 1973ರ 345 ಮತ್ತು 346ನೇ ಪ್ರಕರಣಗಳ ವ್ಯಾಪ್ತಿಯೊಳಗೆ ಕ್ರಿಮಿನಲ್ ನ್ಯಾಯಾಲಯವೆಂದು ಭಾವಿಸುವುದು.–** ಸಾರ್ವಜನಿಕ ನ್ಯಾಸ ಆಯೋಗ, ಉಪ ಸಾರ್ವಜನಿಕ ನ್ಯಾಸ ಆಯುಕ್ತ ಇವರುಗಳು ದಂಡ ಪ್ರಕ್ರಿಯಾ ಸಂಹಿತೆ 1973ರ 345 ಮತ್ತು 346ರ ಪ್ರಕರಣದ ಅರ್ಥ ವ್ಯಾಪ್ತಿಯೊಳಗೆ ಕ್ರಿಮಿನಲ್ ನ್ಯಾಯಾಲಯವೆಂದು ಭಾವಿಸತಕ್ಕದ್ದೆಂದು ರಾಜ್ಯ ಸರ್ಕಾರವು ನಿರ್ದೇಶಿಸಿದರೆ, ಹಾಗೆಯೇ ಭಾವಿಸತಕ್ಕದ್ದು.

**74. ಕಾಲ ಪರಿಮಿತಿ.–** ಈ ಅಧ್ಯಾಯದ ಅಡಿಯಲ್ಲಿ ಅಪೀಲಿನ ಅವಧಿಯನ್ನು ಲೆಕ್ಕ ಹಾಕುವಾಗ ಭಾರತ ಕಾಲ ಪರಿಮಿತಿ ಅಧಿನಿಯಮ, 1963ರ 4, 5, 12 ಮತ್ತು 14ನೇ ಪ್ರಕರಣದ ಉಪಬಂಧಗಳು ಅಂಥ ಅಪೀಲುಗಳನ್ನು ದಾಖಲು ಮಾಡುವುದಕ್ಕೆ ಅನ್ವಯವಾಗತಕ್ಕದ್ದು.

**75. ಈ ಅಧಿನಿಯಮದ ಅಡಿಯಲ್ಲಿ ಸಾರ್ವಜನಿಕ ನ್ಯಾಸ ಆಯೋಗದ ಅಥವಾ ಉಪ ಸಾರ್ವಜನಿಕ ನ್ಯಾಸ ಆಯುಕ್ತರ ಮುಂದಿರುವ ವ್ಯವಹರಣೆಗಳಿಗೆ ಸಿವಿಲ್ ಪ್ರಕ್ರಿಯಾ ಸಂಹಿತೆಯು ಅನ್ವಯವಾಗುವುದು.–** ಸಾರ್ವಜನಿಕ ನ್ಯಾಸ ಆಯೋಗದ ಅಥವಾ ಉಪ ಸಾರ್ವಜನಿಕ ನ್ಯಾಸ ಆಯುಕ್ತನ ಮುಂದಿರುವ ಎಲ್ಲ ವ್ಯವಹರಣೆಗಳಿಗೆ ಸಿವಿಲ್ ಪ್ರಕ್ರಿಯಾ ಸಂಹಿತೆ, 1908ರ ಉಪಬಂಧಗಳನ್ನು ಅನ್ವಯಿಸತಕ್ಕದ್ದು.

**76. ಕೆಲವು ಪ್ರಕರಣಗಳ ಅಡಿಯಲ್ಲಿ ಬಾಕಿಯಿರುವ ಮೊತ್ತದ ವಸೂಲಿ.–** 17, 19, 45 ಮತ್ತು 64ನೇ ಪ್ರಕರಣಗಳ ಅಡಿಯಲ್ಲಿ ಅಥವಾ ಯಾವುದೇ ನಿಯಮದಡಿಯಲ್ಲಿ ಸಂದಾಯ ಮಾಡಬಹುದಾದ ಎಲ್ಲಾ ಮೊತ್ತಗಳನ್ನು, ಸಂದಾಯ ಮಾಡದಿದ್ದಲ್ಲಿ, ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಭೂ ಕಂದಾಯದ ಬಾಕಿಯೆಂಬಂತೆ ವಸೂಲು ಮಾಡತಕ್ಕದ್ದು.

## ಅಧ್ಯಾಯ – XII

## ಸಂಕೀರ್ಣ

**77. ಸಾರ್ವಜನಿಕ ನ್ಯಾಸ ಆಯೋಗ ಮತ್ತು ಇತರೆ ಅಧಿಕಾರಿಗಳು ಸಾರ್ವಜನಿಕ ನೌಕರರಾಗಿರುವರು.–** ಈ ಅಧಿನಿಯಮದಡಿಯಲ್ಲಿ ನೇಮಕವಾದ ಸಾರ್ವಜನಿಕ ನ್ಯಾಸ ಆಯೋಗ, ಉಪ ಸಾರ್ವಜನಿಕ ನ್ಯಾಸ ಆಯುಕ್ತರು, ಕಾರ್ಯದರ್ಶಿಯವರು, ಪರಿಶೀಲಕರು ಹಾಗೂ ಇತರೆ ಅಧೀನ ಅಧಿಕಾರಿಗಳನ್ನು ಭಾರತೀಯ ದಂಡ ಸಂಹಿತೆಯ 21ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ಸಾರ್ವಜನಿಕ ನೌಕರರಾಗಿರುವರೆಂದು ಭಾವಿಸತಕ್ಕದ್ದು.

**78. ಒಂದು ಸ್ವತ್ತನ್ನು ಸಾರ್ವಜನಿಕ ನ್ಯಾಸದ ಸ್ವತ್ತೆಂದು ತೀರ್ಮಾನಿಸುವುದು.–** ನ್ಯಾಸವು ಅಸ್ಥಿತ್ವದಲ್ಲಿದೆಯೇ ಅಥವಾ ಇಲ್ಲವೇ ಹಾಗೂ ಅಂಥ ನ್ಯಾಸವು ಸಾರ್ವಜನಿಕ ನ್ಯಾಸವೇ ಅಥವಾ ಒಂದು ನಿರ್ದಿಷ್ಟ ಸ್ವತ್ತು ಅಂಥ ನ್ಯಾಸದ ಸ್ವತ್ತೇ ಎಂಬ ಪ್ರಶ್ನೆಯನ್ನು ಉಪ ಸಾರ್ವಜನಿಕ ನ್ಯಾಸ ಆಯುಕ್ತನು ಅಥವಾ ಅಪೀಲಿನಲ್ಲಿ ಸಾರ್ವಜನಿಕ ನ್ಯಾಸ ಆಯೋಗವು ನಿರ್ಧರಿಸತಕ್ಕದ್ದು.

**79. ಸಾರ್ವಜನಿಕ ನ್ಯಾಸ ಆಯೋಗವು, ಕಾನೂನು ನಡೆವಳಿಗಳ ಮೇಲೆ ಮಾಡಿದ ವೆಚ್ಚಗಳು ಮತ್ತು ಖರ್ಚುಗಳ ವಸೂಲಿ.–** ಯಾವುದೇ ಸಾರ್ವಜನಿಕ ನ್ಯಾಸಗಳ ಸಂಬಂಧದಲ್ಲಿ ಯಾವುದೇ ಕಾನೂನು ವ್ಯವಹರಣೆಗಳಲ್ಲಿ ಪಕ್ಷಕಾರರಂತೆ ಅಥವಾ ಅದರೊಂದಿಗಿನ ಸಂಬಂಧದಲ್ಲಿ ಸಾರ್ವಜನಿಕ ನ್ಯಾಸ ಆಯೋಗ ಅಥವಾ ಉಪ ಸಾರ್ವಜನಿಕ ನ್ಯಾಸ ಆಯುಕ್ತನು ಮಾಡಿದ ಎಲ್ಲಾ ವೆಚ್ಚಗಳನ್ನು, ಸಾರ್ವಜನಿಕ ನ್ಯಾಸಗಳ ಆಡಳಿತ ನಿಧಿಗಳಿಂದ ಸಂದಾಯ ಮಾಡತಕ್ಕದ್ದು.

**80. ನಿಯಮಿಸಲಾದಂತೆ ಸಂದಾಯ ಮಾಡಬೇಕಾದ ಶುಲ್ಕ.–** ಈ ಅಧಿನಿಯಮದ ಅಡಿಯಲ್ಲಿ ಅರ್ಜಿಗಳು ಮತ್ತು ಮನವಿ/ ಅಪೀಲುಗಳು ಅಥವಾ ದಸ್ತಾವೇಜುಗಳ ಜೊತೆಗೆ ನಿಯಮಿಸಬಹುದಾದಂತೆ ಅಂಥ ಶುಲ್ಕವು ಇರತಕ್ಕದ್ದು.

**81. ಅಧಿಕಾರ ವ್ಯಾಪ್ತಿಯ ಪ್ರತಿಷೇಧ.–** ಈ ಅಧಿನಿಯಮದಲ್ಲಿ ಸ್ಪಷ್ಟವಾಗಿ ಉಪಬಂಧಿಸಿದುದನ್ನು ಉಳಿದು, ಯಾವುದೇ ಸಿವಿಲ್ ನ್ಯಾಯಾಲಯವು, ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಯಾವೊಬ್ಬ ಅಧಿಕಾರಿಯು ಅಥವಾ ಪ್ರಾಧಿಕಾರವು ತೀರ್ಮಾನಿಸಲು ಅಥವಾ ವ್ಯವಹರಿಸಲು ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಯಾವುದೇ ಪ್ರಶ್ನೆಯನ್ನು ನಿರ್ಧರಿಸುವ ಅಥವಾ ವ್ಯವಹರಿಸುವ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವುದಿಲ್ಲ ಮತ್ತು ಅಂಥ ಅಧಿಕಾರಿಯು ಅಥವಾ ಪ್ರಾಧಿಕಾರವು ಮಾಡಿದ ತೀರ್ಮಾನ ಅಥವಾ ಆದೇಶವು ಅಂತಿಮ ಮತ್ತು ನಿರ್ಣಾಯಕವಾಗಿರತಕ್ಕದ್ದು.

**82. ದಾವೆಗಳು ಮತ್ತು ವ್ಯವಹರಣೆಗಳಿಂದ ರಕ್ಷಣೆ.–** ಈ ಅಧಿನಿಯಮದ ಅಡಿಯಲ್ಲಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲಾಗಿದೆಯೆಂದು ತಾತ್ಪರ್ಯವಾಗುವ ಯಾವುದೇ ಕಾರ್ಯದ ಸಂಬಂಧದಲ್ಲಿ ರಾಜ್ಯ ಸರ್ಕಾರದ ಅಥವಾ ಯಾವೊಬ್ಬ ಅಧಿಕಾರಿಯ ಅಥವಾ ಪ್ರಾಧಿಕಾರದ ಅಥವಾ ಸಾರ್ವಜನಿಕ ನ್ಯಾಸ ಆಯೋಗದ ಪ್ರತಿನಿಧಿಯ ವಿರುದ್ಧ ಯಾವುದೇ ದಾವೆ, ಅಭಿಯೋಜನೆ ಅಥವಾ ಇತರ ವ್ಯವಹರಣೆಯನ್ನು ಹೂಡತಕ್ಕದ್ದಲ್ಲ.

**83. ಅಭಿಯೋಜನೆಗಾಗಿ ಸಾರ್ವಜನಿಕ ನ್ಯಾಸ ಆಯೋಗದ ಪೂರ್ವ ಮಂಜೂರಾತಿಯು ಅಗತ್ಯವಾಗಿರುವುದು.–** ಈ ಅಧಿನಿಯಮದ ಅಡಿಯಲ್ಲಿ ದಂಡನೀಯವಾದ ಯಾವುದೇ ಅಪರಾಧಕ್ಕಾಗಿ ಯಾವುದೇ ಅಭಿಯೋಜನೆಯನ್ನು ಸಾರ್ವಜನಿಕ ನ್ಯಾಸ ಆಯೋಗದ ಪೂರ್ವ ಮಂಜೂರಾತಿ ಇಲ್ಲದೆ ಹೂಡತಕ್ಕದ್ದಲ್ಲ.

**84. ನಿಯಮಗಳ ರಚನಾಧಿಕಾರ.–**(1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉಪಬಂಧಗಳನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸುವ ಉದ್ದೇಶಕ್ಕಾಗಿ ಪೂರ್ವ ಪ್ರಕಟಣೆಯ ತರುವಾಯ ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಈ ಮೊದಲು ಹೇಳಿದ ಉಪಬಂಧಗಳ ಸಾಮಾನ್ಯತೆಗೆ ಬಾಧಕವಾಗದಂತೆ ಈ ಮುಂದಿನ ಎಲ್ಲಾ ಅಥವಾ ಯಾವುದೇ ವಿಷಯಗಳ ಬಗ್ಗೆ ನಿಯಮಗಳನ್ನು ರಚಿಸಬಹುದು, ಎಂದರೆ:–

(ಎ) ಸಾರ್ವಜನಿಕ ನ್ಯಾಸದ ನೋಂದಣಿ ಕಚೇರಿಯಲ್ಲಿ ಇಟ್ಟುಕೊಂಡು ಬರಬೇಕಾದ ಮತ್ತು ನಿರ್ವಹಿಸಬೇಕಾದ ಪುಸ್ತಕಗಳು, ವಿಷಯಸೂಚಿಗಳು ಮತ್ತು ರಿಜಿಸ್ಟರುಗಳು ಹಾಗೂ 16ನೇ ಪ್ರಕರಣದ ಅಡಿಯಲ್ಲಿ ಅಂಥ ಪುಸ್ತಕಗಳು ಸೂಚಿಗಳು ಮತ್ತು ರಿಜಿಸ್ಟರುಗಳಲ್ಲಿ ನಮೂದಿಸಬೇಕಾದ ವಿವರಗಳು;

(ಬಿ) ಸಾರ್ವಜನಿಕ ನ್ಯಾಸದ ನೋಂದಣಿಗಾಗಿ ಸಲ್ಲಿಸಬೇಕಾದ ಅರ್ಜಿಯ ನಮೂನೆ ಮತ್ತು ಅದಕ್ಕಾಗಿ ಸಂದಾಯ ಮಾಡಬೇಕಾದ ಶುಲ್ಕ, ಅದರಲ್ಲಿ ನಮೂದಿಸಬೇಕಾದ ಇತರ ವಿವರಗಳು ಮತ್ತು ನೋಂದಣಿಗಾಗಿನ ಅರ್ಜಿಗೆ ಸಹಿ ಮಾಡಬೇಕಾದ ಮತ್ತು ಸತ್ಯಾಪನೆ ಮಾಡಬೇಕಾದ ವಿಧಾನ ಹಾಗೂ 17ನೇ ಪ್ರಕರಣದ ಅಡಿಯಲ್ಲಿ ವಿವರಣೆಗಳನ್ನು ಕೊಡುವುದು ಅವಶ್ಯಕವಾಗಿಲ್ಲದ ನ್ಯಾಸದ ಸಂಬಂಧದಲ್ಲಿ ನ್ಯಾಸದ ಸ್ವತ್ತಿನ ಮೌಲ್ಯ ಮತ್ತು ಸ್ವರೂಪ;

(ಸಿ) 18ನೇ ಪ್ರಕರಣದ ಅಡಿಯಲ್ಲಿ ಉಪ ಸಾರ್ವಜನಿಕ ನ್ಯಾಸ ಆಯುಕ್ತನು ನಡೆಸಬೇಕಾದ ವಿಚಾರಣೆಯ ವಿಧಾನ;

(ಡಿ) 21ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ಬದಲಾವಣೆಗಳ ಸಂಬಂಧದಲ್ಲಿ ನ್ಯಾಸಧಾರಿಯು ಮಾಡಬೇಕಾದ ವರದಿಯ ನಮೂನೆ ಮತ್ತು (2)ನೇ ಉಪ ಪ್ರಕರಣದ ಅಡಿಯಲ್ಲಿ ನಡೆಸಬೇಕಾದ ವಿಚಾರಣೆಯ ವಿಧಾನ;

(ಇ) ನೋಂದಣಿಗಾಗಿ ನ್ಯಾಸಧಾರಿಗಳು ಉಪ ಸಾರ್ವಜನಿಕ ನ್ಯಾಸ ಆಯುಕ್ತನು ಕಳುಹಿಸಬೇಕಾದ ಜ್ಞಾಪನ ಪತ್ರದ ನಮೂನೆ ಮತ್ತು ಜ್ಞಾಪನ ಪತ್ರಕ್ಕೆ ಸಹಿ ಮಾಡತಕ್ಕ ಮತ್ತು ಸತ್ಯಾಪನೆ ಮಾಡತಕ್ಕ ವಿಧಾನ;

(ಎಫ್) 27ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ಮಾಡಬೇಕಾದ ವಿಚಾರಣೆ ;

(ಜಿ) 32ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ಸಾರ್ವಜನಿಕ ನ್ಯಾಸದ ವಾರ್ಷಿಕ ಆದಾಯವು ಯಾವ ಮೊಬಲಗನ್ನು ಮೀರಿದರೆ ಆಯವ್ಯಯವನ್ನು ಸಿದ್ಧಪಡಿಸಿ ಸಲ್ಲಿಸಬೇಕಾಗುತ್ತದೆಯೋ ಆ ಮೊಬಲಗು ಮತ್ತು ಅಂಥ ಆಯವ್ಯಯದ ನಮೂನೆ ಅಥವಾ ನಮೂನೆಗಳು;

(ಎಚ್) 33ನೇ ಪ್ರಕರಣದ (2)ನೇ ಉಪ ಪ್ರಕರಣದ ಅಡಿಯಲ್ಲಿ ಲೆಕ್ಕಪತ್ರಗಳಲ್ಲಿ ನಮೂದಿಸಬೇಕಾದ ವಿವರಗಳು ಮತ್ತು 34ನೇ ಪ್ರಕರಣದ ಅಡಿಯಲ್ಲಿ ವಿಶೇಷ ಲೆಕ್ಕಪರಿಶೋಧನೆಗಾಗಿ ಸಂದಾಯ ಮಾಡಬೇಕಾದ ಶುಲ್ಕ;

(ಐ) 56ನೇ ಪ್ರಕರಣದ (2)ನೇ ಉಪ ಪ್ರಕರಣದ ಅಡಿಯಲ್ಲಿ ಸಲ್ಲಿಸಬೇಕಾದ ಲೆಕ್ಕಪತ್ರದ ನಮೂನೆ ಮತ್ತು (3)ನೇ ಉಪ ಪ್ರಕರಣದ ಅಡಿಯಲ್ಲಿ ಹೊರಡಿಸಬೇಕಾದ ಆದೇಶದ ನಮೂನೆ;

(ಜೆ) 60ನೇ ಪ್ರಕರಣದ (2)ನೇ ಉಪ ಪ್ರಕರಣದ ಅಡಿಯಲ್ಲಿ ಸಮಿತಿಯು ಸ್ವತ್ತಿನ ಸಂಬಂಧದಲ್ಲಿ ಯಾವ ಷರತ್ತುಗಳು ಮತ್ತು ನಿಬಂಧನೆಗಳಿಗೊಳಪಟ್ಟು ವ್ಯವಹರಿಸತಕ್ಕದ್ದೋ ಆ ಷರತ್ತುಗಳು ಮತ್ತು ನಿಬಂಧನೆಗಳು;

(ಕೆ) 60ನೇ ಪ್ರಕರಣದ ಅಡಿಯಲ್ಲಿ ಸಾರ್ವಜನಿಕ ನ್ಯಾಸವು ವಾರ್ಷಿಕ ವಂತಿಗೆಯನ್ನು ಸಂದಾಯ ಮಾಡತಕ್ಕ ದಿನಾಂಕ ಹಾಗೂ ವಿಧಾನ ಮತ್ತು (3)ನೇ ಉಪ ಪ್ರಕರಣದ ವಿವರಣೆಯ ಅಡಿಯಲ್ಲಿ ಅನುಮತಿಸತಕ್ಕ ವಜಾಗಳು ಮತ್ತು ಆ ಪ್ರಕರಣದ (4)ನೇ ಉಪ ಪ್ರಕರಣದ ಅಡಿಯಲ್ಲಿ ಸಾರ್ವಜನಿಕ ನ್ಯಾಸವು ವಿನಾಯಿತಿಸಬೇಕಾದ ಯಾವುದೇ ವಿನಾಯಿತಿಯ ಅಡಿಯಲ್ಲಿ ಬರುವ ನ್ಯಾಸವಾಗಿದೆಯೇ ಅಥವಾ ಇಲ್ಲವೇ ಎಂಬ ಬಗ್ಗೆ ರಾಜ್ಯ ಸರ್ಕಾರದ ತೀರ್ಮಾನವನ್ನು ಪಡೆದುಕೊಳ್ಳುವ ವಿಧಾನ ಮತ್ತು 62ನೇ ಪ್ರಕರಣದ ಅಡಿಯಲ್ಲಿ ಅಂಥ ನಿಧಿಯ ಅಭಿರಕ್ಷೆ ಮತ್ತು ಹೂಡಿಕೆ ಹಾಗೂ ಅದರಿಂದ ಸಂದಾಯವನ್ನು ಮಾಡತಕ್ಕ ವಿಧಾನ;

(ಎಲ್) 66 ಮತ್ತು 67ನೇ ಪ್ರಕರಣಗಳ ಅಡಿಯಲ್ಲಿ ಅಂಥ ಅಪೀಲನ್ನು ಸಲ್ಲಿಸುವುದಕ್ಕಾಗಿ ಅಪೀಲಿನ ನಮೂನೆ ಮತ್ತು ಸಂದಾಯ ಮಾಡಬೇಕಾದ ಶುಲ್ಕ;

(ಎಂ) ಸಾರ್ವಜನಿಕ ನ್ಯಾಸಗಳ ಆಡಳಿತ ನಿಧಿಯ ಅಭಿರಕ್ಷೆ ಮತ್ತು ಅದಕ್ಕೆ ಜಮೆ ಮಾಡಬೇಕಾದ ಹಣದ ಹೂಡಿಕೆ ಹಾಗೂ ಅದರಿಂದ ಬಟವಾಡೆ ಮತ್ತು ಹಂಚಿಕೆ;

(ಎನ್) ಈ ಅಧಿನಿಯಮದ ಅಡಿಯಲ್ಲಿ ನಿಯಮಿಸಬೇಕಾದ ಅಥವಾ ನಿಯಮಿಸಬಹುದಾದ ಯಾವುದೇ ಇತರ ವಿಷಯ.

(3) ಈ ಅಧಿನಿಯಮದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ, ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಿರಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಹಾಗೆ ಮಾಡಿಸಿದ ಮೇಲೆ ಹೇಳಿದ ಅಧಿವೇಶನ ಅಥವಾ ನಿರಂತರ ಅಧಿವೇಶನಗಳ ನಿಕಟ ತರುವಾಯದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮುಂಚೆ ರಾಜ್ಯ ವಿಧಾನಮಂಡಲದ ಎರಡೂ ಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಡು ಮಾಡಲು ಒಪ್ಪಿದರೆ, ಅಥವಾ ಆ ನಿಯಮವನ್ನು ರಚಿಸತಕ್ಕದ್ದಲ್ಲವೆಂದು ಒಪ್ಪಿದರೆ ಮತ್ತು ಅಂಥ ತೀರ್ಮಾನವನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚಿಸತಕ್ಕದ್ದು, ತದನಂತರ ಅಂಥ ನಿಯಮವು ಅಂಥ ಅಧಿಸೂಚನೆಯ ದಿನಾಂಕದಿಂದ ಹಾಗೆ ಮಾರ್ಪಾಟಾದ ರೀತಿಯಲ್ಲಿ ಮಾತ್ರವೇ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರ ಪರಿಣಾಮಕಾರಿಯಾಗತಕ್ಕದ್ದಲ್ಲ; ಆದಾಗ್ಯೂ, ಯಾವುದೇ ಅಂಥ ಮಾರ್ಪಾಡು ಅಥವಾ ರದ್ದತಿಯು ಆ ನಿಯಮದ ಅಡಿಯಲ್ಲಿ ಈ ಮುಂಚೆ ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧೆ ಉಂಟುಮಾಡತಕ್ಕದ್ದಲ್ಲ.

**85. ವಿನಾಯತಿ ನೀಡುವುದಕ್ಕೆ ಅಧಿಕಾರ.–** ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಪೂರ್ವ ಪ್ರಕಟಣೆಯ ತರುವಾಯ, ಅದರಲ್ಲಿ ನಿರ್ದಿಷ್ಟ ಪಡಿಸಿದ ದಿನಾಂಕದಿಂದ, ಯಾವುದೇ ಸಾರ್ವಜನಿಕ ನ್ಯಾಸ ಅಥವಾ ಸಾರ್ವಜನಿಕ ನ್ಯಾಸಗಳ ವರ್ಗವನ್ನು, ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಷರತ್ತುಗಳಿಗೆ ಒಳಪಟ್ಟು, ಈ ಅಧಿನಿಯಮದ ಎಲ್ಲಾ ಅಥವಾ ಯಾವುದೇ ಉಪಬಂಧಗಳಿಂದ, ವಿನಾಯಿತಿಗೊಳಿಸತಕ್ಕದ್ದು.

**86. ತೊಂದರೆಗಳನ್ನು ನಿವಾರಿಸಲು ಅಧಿಕಾರ.– (1)** ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವ ಸಂಬಂಧದಲ್ಲಿ ಈ ಅಧಿನಿಯಮವು ಪ್ರಾರಂಭವಾಗುವುದಕ್ಕೆ ನಿಕಟಪೂರ್ವದಲ್ಲಿ ಜಾರಿಯಲ್ಲಿದ್ದ ಅಧಿನಿಯಮಗಳ ಉಪಬಂಧಗಳಿಂದ ಸದರಿ ಉಪಬಂಧಗಳಿಗೆ ಪರಿವರ್ತನೆಯಾದ ಪರಿಣಾಮವಾಗಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ತೊಂದರೆಯನ್ನು ನಿವಾರಿಸುವುದಕ್ಕಾಗಿ ಅವಶ್ಯಕ ಅಥವಾ ಯುಕ್ತವೆಂದು ಅದಕ್ಕೆ ಕಂಡುಬರುವಂತೆ ಈ ಅಧಿನಿಯಮದ ಉಪಬಂಧಕ್ಕೆ ಅಸಂಗತವಾಗಿಲ್ಲದ ಉಪಬಂಧಗಳನ್ನು ಮಾಡಬಹುದು.

(2) ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವ ಸಂಬಂಧದಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, (ಈ ಅಧಿನಿಯಮದ ಪ್ರಾರಂಭಕ್ಕೆ ಹೊರತು ಅನ್ಯಥಾ) ರಾಜ್ಯ ಸರ್ಕಾರವು, ತೊಂದರೆಯನ್ನು ನಿವಾರಿಸುವುದಕ್ಕಾಗಿ ಅವಶ್ಯಕ ಅಥವಾ ಯುಕ್ತವೆಂದು ಅದಕ್ಕೆ ಕಂಡುಬರುವಂತೆ, ಈ ಅಧಿನಿಯಮದ ಉಪಬಂಧಕ್ಕೆ ಅಸಂಗತವಾಗಿಲ್ಲದ ಉಪಬಂಧಗಳನ್ನು ಮಾಡಬಹುದು.

(3) (1)ನೇ ಉಪ ಪ್ರಕರಣದ ಅಥವಾ (2)ನೇ ಉಪ ಪ್ರಕರಣದ ಅಡಿಯಲ್ಲಿ ಮಾಡಲಾದ ಯಾವುದೇ ಅಧಿಸೂಚನೆಯ ಉಪಬಂಧಗಳು ಈ ಅಧಿನಿಯಮದಲ್ಲಿ ಅಧಿನಿಯಮಿತವಾದಂತೆ ಪರಿಣಾಮಕಾರಿಯಾಗತಕ್ಕದ್ದು ಮತ್ತು ಅಂಥ ಯಾವುದೇ ಅಧಿಸೂಚನೆಯನ್ನು, ಗೊತ್ತುಪಡಿಸಿದ ದಿನಾಂಕಕ್ಕೆ ಮುಂಚೆಯಲ್ಲದ ಯಾವುದೇ ದಿನಕ್ಕೆ ಪೂರ್ವಾನ್ವಯವಾಗುವಂತೆ ಮಾಡಬಹುದು.

**FINANCIAL MEMORANDUM**

There is no extra expenditure involved in the proposed Legislative measure.

**Dr. V.S.ACHARYA**
Minister for Higher Education,
Planning, Statistics, Muzrai,
Information Technology and Bio Technology

**V. SHREEH**
Secretary
Karnataka Legislative Council

# ವಿಶೇಷ ಪತ್ರಿಕೆ

| | | |
|---|---|---|
| ಭಾಗ – **IV** | ಬೆಂಗಳೂರು, ಬುಧವಾರ, ಮಾರ್ಚ್ ೧೬, ೨೦೧೧ (ಫಾಲ್ಗುಣ ೨೫, ಶಕ ವರ್ಷ ೧೯೩೨) | ನಂ. ೩೧೪ |

## ELECTION COMMISSION OF INDIA

Nirvachan Sadan, Ashoka Road, New Delhi – 110001.

Dated: 16th March, 2011
25 Phalguna, 1932 (Saka)

### NOTIFICATION

No. 100/KT-LA/1/2011: **Whereas,** the seat of Sri Ashwath M.C. in the Legislative Assembly of the Karnataka State, elected from 185-Channapatna Assembly Constituency has become vacant on 14.10.2010, by reason of his resignation ; and

2. **Whereas,** a bye-election is to be held for the purpose of filling the vacancy so caused;

3. **Now, therefore,** in pursuance of sub-section (1) of Section 150, and Section 30 and 56 of the Representation of the People Act, 1951 (43 of 1951), the Election Commission of India hereby:-

**(A)** **Calls upon** the said 185-Channapatna Assembly Constituency in the State of Karnataka to elect, before the 15.05.2011 (Sunday) and in accordance with the provisions of the said Act and of the rules and orders made thereunder, a person, for the purpose of filling the said vacancy in the Legislative Assembly of the State; and

**(B)** **Appoints,** with respect to the said election:-

(a) the 23.03.2011 (Wednesday), as the last date for making nominations;

(b) the 24.03.2011 (Thursday), as the date for the scrutiny of nominations;

(c) the 26.03.2011 (Saturday), as the last date for the withdrawal of candidatures;

(d) the 09.04.2011 (Saturday), as the date, on which a poll shall, if necessary, be taken;

(e) the 15.05.2011 (Sunday), as the date before which the election shall be completed, and

**(C)** **Fixes the hours** from **8.00 A.M** to **5.00 P.M,** as the hours during which the poll shall, if necessary, be taken on the date specified above for the election.

By order,

**R.K. SRIVASTAVA**
Secretary
Election Commission of India

# ವಿಶೇಷ ಪತ್ರಿಕೆ

| | | |
|---|---|---|
| ಭಾಗ – IV | ಬೆಂಗಳೂರು, ಬುಧವಾರ, ಮಾರ್ಚ್ ೧೬, ೨೦೧೧ (ಫಾಲ್ಗುಣ ೨೫, ಶಕ ವರ್ಷ ೧೯೩೨) | ನಂ. ೩೧೫ |

## ELECTION COMMISSION OF INDIA

Nirvachan Sadan, Ashoka Road, New Delhi – 110001.

Dated: 16th March, 2011

25 Phalguna, 1932 (Saka)

### NOTIFICATION

No. 100/KT-LA/2/2011: **Whereas,** the seat of Sri S.V. Ramachandra in the Legislative Assembly of the Karnataka State, elected from 103-Jagalur (ST) Assembly Constituency, has become vacant on 19.10.2010, by reason of his resignation; and

2. **Whereas,** a bye-election is to be held for the purpose of filling the vacancy so caused;

3. **Now, therefore,** in pursuance of sub-section (2) of Section 150, and Sections 30 and 56 of the Representation of the People Act, 1951 (43 of 1951), the Election Commission of India hereby:-

**(A)** **Calls upon** the said 103-Jagalur (ST) Assembly Constituency in the State of Karnataka to elect, before the 15.05.2011 (Sunday) and in accordance with the provisions of the said Act and of the rules and orders made thereunder, a person of the Schedule Tribe of the State for the purpose of filling the said vacancy in the Legislative Assembly of the State; and

**(B)** **Appoints,** with respect to the said election:-

(a) the 23.03.2011 (Wednesday), as the last date for making nominations;

(b) the 24.03.2011 (Thursday), as the date for the scrutiny of nominations;

(c) the 26.03.2011 (Saturday), as the last date for the withdrawal of candidatures;

(d) the 09.04.2011 (Saturday), as the date, on which a poll shall, if necessary, be taken;

(e) the 15.05.2011 (Sunday), as the date before which the election shall be completed, and

**(C)** **Fixes the hours** from **8.00 A.M** to **5.00 P.M,** as the hours during which the poll shall, if necessary, be taken on the date specified above for the election.

By order,

**R.K. SRIVASTAVA**
Secretary
Election Commission of India

# ವಿಶೇಷ ಪತ್ರಿಕೆ

| | | |
|---|---|---|
| ಭಾಗ – IV | ಬೆಂಗಳೂರು, ಬುಧವಾರ, ಮಾರ್ಚ್ ೧೬, ೨೦೧೧ (ಫಾಲ್ಗುಣ ೨೫, ಶಕ ವರ್ಷ ೧೯೩೨) | ನಂ. ೩೧೬ |

## ELECTION COMMISSION OF INDIA

Nirvachan Sadan, Ashoka Road, New Delhi – 110001.

Dated: 16th March, 2011

25 Phalguna, 1932 (Saka)

### NOTIFICATION

No. 100/KT-LA/3/2011: **Whereas,** the seat of Sri Narayana Swamy M. in the Legislative Assembly of the Karnataka State, elected from 147-Bangarapet (SC) Assembly Constituency, has become vacant on 20.10.2010, by reason of his resignation; and

2. **Whereas,** a bye-election is to be held for the purpose of filling the vacancy so caused;

3. **Now, therefore,** in pursuance of sub-section (2) of Section 150, and Sections 30 and 56 of the Representation of the People Act, 1951 (43 of 1951), the Election Commission of India hereby:-

**(A)** **Calls upon** the said 147-Bangarapet (SC) Assembly Constituency in the State of Karnataka to elect, before the 15.05.2011 (Sunday) and in accordance with the provisions of the said Act and of the rules and orders made thereunder, a person of the Schedule Caste of the State for the purpose of filling the said vacancy in the Legislative Assembly of the State; and

**(B)** **Appoints,** with respect to the said election:-

(a) the 23.03.2011 (Wednesday), as the last date for making nominations;

(b) the 24.03.2011 (Thursday), as the date for the scrutiny of nominations;

(c) the 26.03.2011 (Saturday), as the last date for the withdrawal of candidatures;

(d) the 09.04.2011 (Saturday), as the date, on which a poll shall, if necessary, be taken;

(e) the 15.05.2011 (Sunday), as the date before which the election shall be completed, and

**(C)** **Fixes the hours** from **8.00 A.M** to **5.00 P.M,** as the hours during which the poll shall, if necessary, be taken on the date specified above for the election.

By order,

**R.K. SRIVASTAVA**
Secretary
Election Commission of India

# ವಿಶೇಷ ಪತ್ರಿಕೆ


| ಭಾಗ – **IV-A** | ಬೆಂಗಳೂರು, ಬುಧವಾರ, ಮಾರ್ಚ್ ೧೬, ೨೦೧೧ (ಫಾಲ್ಗುಣ ೨೫, ಶಕ ವರ್ಷ ೧೯೩೨) | ನಂ. ೩೧೯ |
|---|---|---|


## PERSONNEL & ADMINISTRATIVE REFORMS SECRETARIAT

## N O T I F I C A T I O N

**No. DPAR 21 SRR 2011, Bangalore, Dated: 15.3.2011**

In the Schedule to the Notification No.DPAR 52 SRR 99 dated 29.11.2002 in columns 5, 6, 7 and 8 of Sl.No.47 for the words ‘sr. SDA’ the words ‘SDA’ shall be substituted with immediate effect.

By Order and in the name of the Governor of Karnataka
**DEVARAJU**
Under Secretary to Government,
Department of Personnel & Administrative Reforms
(Service Rules-1).

ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಮಾರ್ಚ್ ೧೬, ೨೦೧೧ (ಫಾಲ್ಗುಣ ೨೫, ಶಕ ವರ್ಷ ೧೯೩೨) | ನಂ. ೩೨೧ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/18/Bill/2011, Bangalore, Dated: 16th March, 2011**

The following Bill was introduced in Legislative Assembly on 16.3.2011.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನಸಭೆ**

**ಒಂಭತ್ತನೇ ಅಧಿವೇಶನ**

**ಕರ್ನಾಟಕ ಸರ್ಕಾರಿ ಉದ್ಯಾನವನಗಳ (ಸಂರಕ್ಷಣೆ) (ತಿದ್ದುಪಡಿ) ವಿಧೇಯಕ, 2011**

**(2011ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 22)**

ಕರ್ನಾಟಕ ಸರ್ಕಾರಿ ಉದ್ಯಾನವನಗಳ (ಸಂರಕ್ಷಣೆ) ಅಧಿನಿಯಮ, 1975ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ, ಕರ್ನಾಟಕ ಸರ್ಕಾರಿ ಉದ್ಯಾನವನಗಳ (ಸಂರಕ್ಷಣೆ) ಅಧಿನಿಯಮ, 1975ನ್ನು (1975ರ ಕರ್ನಾಟಕ ಅಧಿನಿಯಮ 23) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

1. **ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ** .– (1) ಈ ಅಧಿನಿಯಮವನ್ನು ಕರ್ನಾಟಕ ಸರ್ಕಾರಿ ಉದ್ಯಾನವನಗಳ (ಸಂರಕ್ಷಣೆ) (ತಿದ್ದುಪಡಿ) ಅಧಿನಿಯಮ, 2011 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 5ನೇ ಪ್ರಕರಣದ ತಿದ್ದುಪಡಿ.**– ಕರ್ನಾಟಕ ಸರ್ಕಾರಿ ಉದ್ಯಾನವನಗಳ (ಸಂರಕ್ಷಣೆ) ಅಧಿನಿಯಮ 1975ರ (1975ರ ಕರ್ನಾಟಕ ಅಧಿನಿಯಮ 23) 5ನೇ ಪ್ರಕರಣದಲ್ಲಿ (ಡಿ) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ :–

"(ಇ) ಉಚ್ಚ ನ್ಯಾಯಾಲಯದ ವಕೀಲರು ಮತ್ತು ಸಂದರ್ಶಕರ ವಾಹನಗಳನ್ನು ನಿಲ್ಲಿಸುವುದಕ್ಕೆ, ಉಚ್ಚ ನ್ಯಾಯಾಲಯದ ಕಟ್ಟಡ ಮತ್ತು ಕೆಜಿಐಡಿಯ ಹಳೆಯ ಕಟ್ಟಡದ ನಡುವೆ 18028.35 ಚದರ ಮೀಟರುಗಳು, ಎಂದರೆ:–

ಪೂರ್ವ : ಕೆಜಿಐಡಿ ಕಟ್ಟಡ ಮತ್ತು ಉಚ್ಚ ನ್ಯಾಯಾಲಯ ಕಟ್ಟಡ
ಭದ್ರತಾ ಬೇಲಿ 120.65 ಮೀಟರುಗಳು

ಪಶ್ಚಿಮ : ಅಂಬೇಡ್ಕರ್ ಬೀದಿ 170.68 ಮೀಟರುಗಳು

ಉತ್ತರ : ಕೆಜಿಐಡಿ ರಸ್ತೆಯಿಂದ ಅಂಬೇಡ್ಕರ್ ಬೀದಿ 137.27 ಮೀಟರುಗಳು

ದಕ್ಷಿಣ : ಉಚ್ಚ ನ್ಯಾಯಾಲಯ ಮತ್ತು ಅಂಬೇಡ್ಕರ್ ಬೀದಿಯಿಂದ ಉಚ್ಚನ್ಯಾಯಾಲಯ ಭದ್ರತಾ ಬೇಲಿಯ ಕಡೆಗೆ ಹೋಗುವ ರಸ್ತೆ 170.42 ಮೀಟರುಗಳು."

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಈಗಿರುವ ಮರಗಳಿಗೆ ತೊಂದರೆಯಾಗದಂತೆ ಕಬ್ಬನ್‌ಪಾರ್ಕ್‌ನಲ್ಲಿ ವಕೀಲರು ಮತ್ತು ಸಂದರ್ಶಕರ ವಾಹನಗಳಿಗೆ ನಿಲುಗಡೆ ಸ್ಥಳವನ್ನು ಒದಗಿಸುವುದಕ್ಕಾಗಿ, ಕರ್ನಾಟಕ ಸರ್ಕಾರಿ ಉದ್ಯಾನವನಗಳ (ಸಂರಕ್ಷಣೆ) ಅಧಿನಿಯಮ, 1975ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಎಸ್.ಎ. ರವೀಂದ್ರನಾಥ್**
ತೋಟಗಾರಿಕೆ ಮತ್ತು ಸಕ್ಕರೆ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಸರ್ಕಾರಿ ಉದ್ಯಾನವನಗಳ (ಸಂರಕ್ಷಣೆ) ಅಧಿನಿಯಮ, 1975ರ (1975ರ ಕರ್ನಾಟಕ ಅಧಿನಿಯಮ 23) ಉದ್ಧೃತ ಭಾಗ**

Xx xx xx

**5 ಕೆಲವೊಂದು ಪ್ರಕರಣಗಳಲ್ಲಿ ಅನುಮತಿ.**– 4ನೇ ಪ್ರಕರಣದಲ್ಲಿ ಏನೇ ಇದ್ದರೂ, ರಾಜ್ಯ ಸರ್ಕಾರವು ನಿರ್ಮಾಣ, ನಿರ್ವಹಣೆ, ವ್ಯವಸ್ಥಾಪನೆ, ಬಳಕೆ ಮತ್ತು ಅಂತಹುದೇ ಇತರ ಉದ್ದೇಶಗಳ ಸಂಬಂಧದಲ್ಲಿ ತಾನು ವಿಧಿಸಬಹುದಾದಂಥ ಷರತ್ತುಗಳು ಮತ್ತು ನಿಬಂಧನೆಗಳಿಗೆ ಒಳಪಟ್ಟು.–

(ಎ) ಇಂದಿರಾ ಗಾಂಧಿ ಸಂಗೀತ ಕಾರಂಜಿ ಉದ್ಯಾನವನದಲ್ಲಿ 1223 ಚದರ ಮೀಟರುಗಳನ್ನು ರಸ್ತೆಗಳ ಅಗಲೀಕರಣದ ಉದ್ದೇಶಕ್ಕಾಗಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ, ಮತ್ತು

(ಬಿ) ಲಾಲ್‌ಬಾಗ್ ಉದ್ಯಾನವನದ ಪಶ್ಚಿಮ ದ್ವಾರದ, ಪಶ್ಚಿಮ ಭಾಗದ ಕಡೆಗಿನ (ಪ್ರಸ್ತುತ ಆರ್.ವಿ. ರಸ್ತೆ ಎಂದು ಕರೆಯಲಾಗುತ್ತಿರುವ) ಕಾಂಪೌಂಡು ಗೋಡೆಯ ಉದ್ದಕ್ಕೂ 1135.18 ಚದರ ಮೀಟರುಗಳನ್ನು ಬೆಂಗಳೂರು ಮೆಟ್ರೋ ರೈಲು ಕಾರ್ಪೋರೇಷನ್ ಲಿಮಿಟೆಡ್‌ಗೆ ಬೆಂಗಳೂರಿನ ಮೆಟ್ರೊ ರೈಲು ಯೋಜನೆಯಲ್ಲಿ ಮೇಲು ನಿಲ್ದಾಣವನ್ನು ನಿರ್ಮಿಸುವ ಉದ್ದೇಶಕ್ಕಾಗಿ,

(ಸಿ) ವಿಧಾನಸೌಧ ಮತ್ತು ಕರ್ನಾಟಕ ಉಚ್ಚ ನ್ಯಾಯಾಲಯದ ಮಧ್ಯದಲ್ಲಿರುವ, ಪೂರ್ವಕ್ಕೆ ಸರ್ವೆ ನಂ. 1284ರ ಉದ್ಯಾನವನದ ಪ್ರದೇಶ; ಪಶ್ಚಿಮಕ್ಕೆ ಸರ್ವೆ ನಂ. 570 ; ಉತ್ತರಕ್ಕೆ ನರ್ಸರಿಗೆ ಸಂಪರ್ಕ ಕಲ್ಪಿಸುವ ಸರ್ವೆ ನಂ. 1284ರ ಉದ್ಯಾನವನದ ಪ್ರದೇಶ ಮತ್ತು ದಕ್ಷಿಣಕ್ಕೆ ಉಚ್ಚ ನ್ಯಾಯಾಲಯದ ಮುಂಭಾಗದಲ್ಲಿರುವ ಉದ್ಯಾನವನದ ಪ್ರದೇಶ, ಈ ಮಧ್ಯದಲ್ಲಿರುವ ಕಬ್ಬನ್ ಉದ್ಯಾನವನದ 2126.71 ಚದರ ಮೀಟರ್‌ಗಳ ಪ್ರದೇಶ ;

(ಡಿ) ಪೂರ್ವಕ್ಕೆ ಸರ್ವೆ ನಂ. 1284ರಲ್ಲಿರುವ ಕರ್ನಾಟಕ ಉಚ್ಚ ನ್ಯಾಯಾಲಯ ; ಪಶ್ಚಿಮಕ್ಕೆ ಸರ್ವೆ ನಂ. 1284ರಲ್ಲಿರುವ ವಿಧಾನಸೌಧ ಮತ್ತು ಹೈಕೋರ್ಟ್‌ನ ಮಧ್ಯದಲ್ಲಿರುವ ಕಬ್ಬನ್ ಉದ್ಯಾನವನದ ಪ್ರದೇಶ ; ಉತ್ತರಕ್ಕೆ ಪ್ರಧಾನ ಅಂಚೆ ಕಛೇರಿ ಮತ್ತು ದಕ್ಷಿಣಕ್ಕೆ ಸರ್ವೆ ನಂ. 1284ರಲ್ಲಿಯ ಕಬ್ಬನ್ ಉದ್ಯಾನವನದ ಪ್ರದೇಶ ಈ ಮಧ್ಯದಲ್ಲಿರುವ ಕಬ್ಬನ್ ಉದ್ಯಾನವನದ 11,160 ಚದರ ಮೀಟರ್‌ಗಳ ಪ್ರದೇಶ.

– ಪರಭಾರೆ ಮಾಡಬಹುದು.

Xx xx xx

## KARNATAKA LEGISLATIVE ASSEMBLY

### THIRTEENTH LEGISLATIVE ASSEMBLY
### NINTH SESSION

## THE KARNATAKA GOVERNMENT PARKS (PRESERVATION) (AMENDMENT) BILL, 2011

**(L.A. Bill No. 22 of 2011)**

A Bill further to amend the Karnataka Government Parks (Preservation) Act, 1975.

Whereas it is expedient further to amend the Karnataka Government Parks (Preservation) Act, 1975 (Karnataka Act 23 of 1975) for the purposes hereinafter appearing;

Be it enacted by the Karnataka State Legislature in the sixty second year of the Republic of India, as follows:-

**1. Short title and commencement.-** (1) This Act may be called the Karnataka Government Parks (Preservation) (Amendment) Act, 2011.

(2) It shall come into force at once.

**2. Amendment of section 5.-** In the Karnataka Government Parks (Preservation) Act, 1975 (Karnataka Act 23 of 1975), in section 5, after clause (d), the following shall be inserted, namely:-

"(e) 18028.35 Square meters between High Court Building and Old KGID Building surrounded by,-

East: K.G.I.D. Building and High Court Building Security fence 120.65 meters.

West: Ambedhakar Veedhi 170.68 meters.

North: K.G.I.D. road to Ambedhakar Veedhi. 137.27 meters.

South: High Court Building and Road leading from Ambedhakar Veedhi to High Court Building Security fence 170.42 meters.

to park the Vehicles of High Court Advocates and visitors".

**STATEMENT OF OBJECTS AND REASONS**

It is considered necessary to amend the Karnataka Government Parks (Preservation) Act, 1975, to provide parking space for vehicles of Advocates and visitors in Cubbon Park without disturbing the standing trees.

Hence, the Bill.

**FINANCIAL MEMORANDUM**

There is no extra expenditure involved in the proposed legislative measure.

**S.A.RAVINDRANATH**
Minister for Horticulture and Sugar

**S.B. PATIL**
Secretary
Karnataka Legislative Assembly

**ANNEXURE**

**Extract from the Karnataka Government Parks (Preservation) Act, 1975**
**(Karnataka Act 23 of 1975)**

**XX XX XX**

**5. Permission in certain cases :-** Notwithstanding anything contained in section 4, the State Government may subject to such conditions and restrictions as it may impose as regards construction, maintenance, management use and like matters alienate an area of,-

(a) 1223 sq. mtrs at Indira Gandhi Musical Fountain Park to the Bruhat Bangalore Mahanagara Palike for the purpose of widening of roads; and

(b) 1135. 18 sq. mtrs at Lalbagh gardens along the compound wall of west gate towards western side of the park (presently called R.V. Road) to Bangalore Metro Rail Corporation Limited for the purpose of construction of elevated Station for Metro Rail Project of Bangalore"

(c) 2126.71 sq.mtrs area of Cubbon Park located between Vidhana Soudha and Karnataka High Court Building, East: Park area of survey No. 1284; West: Survey No. 570; North: Park area in survey No. 1284 linking to the nursery and South: Park area of survey No. 1284 opposite to High Court;

(d) 11,160 sq.mtrs area of Cubbon Park located between East: High Court of Karnataka in survey No. 1284; West: Existing Road between Vidhana Soudha, and High Court in the Cubbon Park area of survey No. 1284; North: General Post Office and South: Cubbon Park area of survey No. 1284.

**XX XX XX**

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಬುಧವಾರ, ಮಾರ್ಚ್ ೧೬, ೨೦೧೧ (ಫಾಲ್ಗುಣ ೨೫, ಶಕ ವರ್ಷ ೧೯೩೨) | ನಂ. ೩೨೨ |
|---|---|---|


## KARNATAKA LEGISLATIVE ASSEMBLY SECRETARIAT

### NOTIFICATION

**No. KLA/LGA/24/Bill/2011, Bangalore, Dated: 16th March, 2011**

The following Bill was introduced in Legislative Assembly on 16.3.2011.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನಸಭೆ**

**ಒಂಭತ್ತನೇ ಅಧಿವೇಶನ**

## ಕರ್ನಾಟಕ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸುವ ವಿಧೇಯಕ, 2011

**(2011ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 24)**

ಕರ್ನಾಟಕ ರಾಜ್ಯದಲ್ಲಿನ ಪದವಿಪೂರ್ವ ಶಿಕ್ಷಣದಲ್ಲಿರುವ ವೃತ್ತಿ ಆಧಾರಿತ ಕೋರ್ಸುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸುವುದಕ್ಕಾಗಿ ಉಪಬಂಧ ಕಲ್ಪಿಸಲು ಒಂದು ವಿಧೇಯಕ.

ರಾಜ್ಯದಲ್ಲಿನ ಪದವಿಪೂರ್ವ ಶಿಕ್ಷಣದಲ್ಲಿರುವ ವೃತ್ತಿ ಆಧಾರಿತ ಕೋರ್ಸುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸಲು ಹಾಗೂ ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಉಪಬಂಧ ಕಲ್ಪಿಸುವುದು ವಿಹಿತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸುವ ಅಧಿನಿಯಮ, 2011 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) **"ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರ"** ಎಂದರೆ,

ಸರ್ಕಾರಿ ಆದೇಶ ಸಂಖ್ಯೆ ಡಿಪಿಎಆರ್ 28 ಎಸ್‌ಬಿಸಿ 77, ದಿನಾಂಕ 4.3.1977 ಇಡಿ 64 ಟಿಪಿಯು 76, ದಿನಾಂಕ 12–07–77 ಮತ್ತು ಇಡಿ 19 ಡಿಜಿಡಿ 96 ದಿನಾಂಕ 09–03–99, 27–07–99 ಮತ್ತು 04–09–1999ರ ಅನುಸಾರವಾಗಿ ಹಾಗೂ ಹಾಗೆ ಕಾರ್ಯನಿರ್ವಹಿಸಿರುವಂಥ ಮತ್ತು ಐದು ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿದಂಥ ಮತ್ತು ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಂದು ಅಂಥ ಕಾರ್ಯ ನಿರ್ವಹಿಸುತ್ತಿರುವಂಥವರನ್ನು, ಅರೆಕಾಲಿಕ ಅಥವಾ ಪೂರ್ಣಕಾಲಿಕದ ಆಧಾರದ ಮೇಲೆ ಸರ್ಕಾರಿ ಅಥವಾ ಖಾಸಗಿ ಅನುದಾನಿತ ಪದವಿ ಪೂರ್ವ ಕಾಲೇಜುಗಳ ಮುಖ್ಯಸ್ಥರಿಂದ,–

(i) ವೃತ್ತಿ ಆಧಾರಿತ ಕೋರ್ಸುಗಳ ಬೋಧನಾ ಸಿಬ್ಬಂದಿಯಾಗಿ; ಅಥವಾ

(ii) ವೃತ್ತಿ ಆಧಾರಿತ ಕೋರ್ಸುಗಳಲ್ಲಿ ಕಾರ್ಯಕರ್ತ ಶಿಕ್ಷಕನಾಗಿ; ಅಥವಾ

(iii) ವೃತ್ತಿ ಆಧಾರಿತ ಕೋರ್ಸುಗಳಲ್ಲಿ ಕಚೇರಿ ಸಹಾಯಕನಾಗಿ; ಅಥವಾ

(iv) ವೃತ್ತಿ ಆಧಾರಿತ ಕೋರ್ಸುಗಳಲ್ಲಿ 'ಡಿ' ದರ್ಜೆಯ ನೌಕರನಾಗಿ

–ನೇಮಕಗೊಂಡಿದ್ದ ವ್ಯಕ್ತಿ.

(ಬಿ) **"ಸರ್ಕಾರ"** ಎಂದರೆ, ಕರ್ನಾಟಕ ಸರ್ಕಾರ;

**3. ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ವಿಲೀನ.–** (1) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಖಾಸಗಿ ಅನುದಾನಿತ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವವರನ್ನು ಹೊರತುಪಡಿಸಿ, ಈ ಪ್ರಕರಣದ ಅಡಿಯಲ್ಲಿ ಸರ್ಕಾರವು ಯಾರ ಹೆಸರನ್ನು ಅಧಿಸೂಚಿಸಿದೆಯೋ ಆ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು, ಒಂದು ಸಲದ ಕ್ರಮವಾಗಿ, ಈ ಮುಂದೆ ಹೇಳಿದಂತೆ, ರಾಜ್ಯದ ಮೀಸಲಾತಿ ಕಾರ್ಯನೀತಿಗೆ ಅನುಸಾರ, ಅದರಲ್ಲಿ ನಿರ್ದಿಷ್ಟಪಡಿಸಿರಬಹುದಾದಂತೆ, ಪದವಿಪೂರ್ವ ಶಿಕ್ಷಣ ಸೇವೆಯಲ್ಲಿ, ಸಮಾನ ಖಾಲಿ ಹುದ್ದೆಯ ಹಾಗೂ ಸೇವೆಯ ಅಂಥ ಪ್ರವರ್ಗದಲ್ಲಿ ವಿಲೀನವನ್ನು ಪರಿಗಣಿಸತಕ್ಕದ್ದು:

ಪರಂತು, ಪದವಿಪೂರ್ವ ಶಿಕ್ಷಣ ಸೇವೆಯಲ್ಲಿ ಸಾಕಷ್ಟು ಸಂಖ್ಯೆಯ ಖಾಲಿ ಹುದ್ದೆಗಳು ಲಭ್ಯವಿಲ್ಲದಿದ್ದಲ್ಲಿ, ಸರ್ಕಾರವು, ಇತರೆ ಇಲಾಖೆಗಳಲ್ಲಿ ಲಭ್ಯವಿರುವ ಸಮಾನ ಹುದ್ದೆಗಳ ಖಾಲಿ ಸ್ಥಾನಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಪಡೆದು ನಂತರ ಈ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳನ್ನು ಅಧಿಸೂಚಿಸತಕ್ಕದ್ದು:

ಮತ್ತೂ ಪರಂತು,–

(ಎ) ಯಾವೊಬ್ಬ, ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರನನ್ನು ಆತನಿಗೆ ನೇರವಾಗಿ ಅನ್ವಯಿಸಬಹುದಾದಂಥ ಕಾರಣಗಳಿಗಾಗಿ ಆತನು ಯಾವುದೇ ಸೇವಾ ಭಂಗವಿಲ್ಲದೆ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ನಿರಂತರವಾಗಿ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರನಾಗಿ ಕರ್ತವ್ಯವನ್ನು ನಿರ್ವಹಿಸಿದ್ದ ಹೊರತು, ಮೇಲಿನಂತೆ ವಿಲೀನಗೊಳಿಸತಕ್ಕದ್ದಲ್ಲ;

(ಬಿ) ಯಾವೊಬ್ಬ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರನನ್ನು, ಸಂಬಂಧಿಸಿದ ನೇಮಕಾತಿಯ ಸೂಕ್ತ ನಿಯಮಗಳಡಿಯಲ್ಲಿ, ಆ ಹುದ್ದೆಗಾಗಿ ನಿಯಮಿಸಲಾದ ವಿದ್ಯಾರ್ಹತೆಯನ್ನು ತನ್ನ ವಿಲೀನದ ದಿನಾಂಕದಂದು ಆತನು ಹೊಂದಿರದ ಹೊರತು, ವಿಲೀನಗೊಳಿಸತಕ್ಕದ್ದಲ್ಲ;

(ಸಿ) ಮೀಸಲಾತಿಗೆ ಅಥವಾ ಯಾವುದೇ ಕಾನೂನು ಅಥವಾ ಯಾವುದೇ ಆದೇಶದ ಮೂಲಕ ಅಥವಾ ಅದರ ಅಡಿಯಲ್ಲಿನ ಉಪಬಂಧಗಳಿಗೆ ಅನುಸಾರವಾಗಿ ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಗಳಿಗೆ ಸೇರಿದ ಅಭ್ಯರ್ಥಿಗಳ ಪೈಕಿ ಭರ್ತಿ ಮಾಡಬೇಕೆಂದು ಮೀಸಲಿರಿಸಿದ ಯಾವುದೇ ಹುದ್ದೆಗೆ ಪ್ರತಿಯಾಗಿ, ಈ ಅಧಿನಿಯಮದ ಅಡಿಯಲ್ಲಿ ವಿಲೀನಗೊಳಿಸಬೇಕಾದ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರಲ್ಲಿ ಅಂಥ ವರ್ಗಕ್ಕೆ ಸೇರಿದ ಅಭ್ಯರ್ಥಿಗಳು ಲಭ್ಯವಾದ ಹೊರತು, ನೇಮಕಾತಿಯನ್ನು ಮಾಡತಕ್ಕದ್ದಲ್ಲ, ಅನ್ಯಥಾ ಅಂಥ ಹುದ್ದೆಗಳನ್ನು ಈ ವರ್ಗಗಳಿಂದ ವಿಶೇಷ ನೇಮಕಾತಿ ಪ್ರಕ್ರಿಯೆಯ ಮೂಲಕ ಭರ್ತಿ ಮಾಡಬೇಕಾದ ಬ್ಯಾಕ್‌ಲಾಗ್ ಹುದ್ದೆಗಳಂತೆ ಪರಿಗಣಿಸತಕ್ಕದ್ದು.

(2) ಖಾಸಗಿ ಅನುದಾನಿತ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ಸಂದರ್ಭದಲ್ಲಿ, ಸರ್ಕಾರವು, ಯಾವುದೇ ಖಾಸಗಿ ಅನುದಾನಿತ ಸಂಸ್ಥೆಯಲ್ಲಿ ಲಭ್ಯವಿರುವ ಸೂಕ್ತ ಖಾಲಿ ಸ್ಥಾನಗಳಿಗೆ ಪ್ರತಿಯಾಗಿ ಅಥವಾ ಇನ್ನು ಮುಂದೆ ಉಂಟಾಗುವ ಖಾಲಿ ಸ್ಥಾನಗಳಿಗೆ ಪ್ರತಿಯಾಗಿ ಅರ್ಹ ವ್ಯಕ್ತಿಗಳನ್ನು ವಿಲೀನಗೊಳಿಸಿಕೊಳ್ಳಲು ಅನುದಾನಿತ ಸಂಸ್ಥೆಗಳಿಗೆ ನಿರ್ದೇಶನ ನೀಡಬಹುದು.

**4. ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ವಿಲೀನಕ್ಕೆ ಸಂಬಂಧಿಸಿದ ಪ್ರಕ್ರಿಯೆ.–** (1) ರಾಜ್ಯ ಸರ್ಕಾರವು, ಈ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸಿದ ಷರತ್ತುಗಳನ್ನು ಪೂರೈಸಿದಂಥ ಮತ್ತು ವಿಲೀನಕ್ಕೆ ಅರ್ಹರಾಗಿರುವಂಥ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ಹೆಸರುಗಳನ್ನು ರಾಜ್ಯ ಸರ್ಕಾರಕ್ಕೆ ಶಿಫಾರಸ್ಸು ಮಾಡುವ ಉದ್ದೇಶಕ್ಕಾಗಿ ಅದು ಅವಶ್ಯಕವೆಂದು ಭಾವಿಸಬಹುದಾದಂಥ ಅಂಥ ಸದಸ್ಯರ ಸಂಖ್ಯೆಯನ್ನು ಒಳಗೊಂಡ ಸಮಿತಿಯನ್ನು ರಚಿಸತಕ್ಕದ್ದು. ರಾಜ್ಯ ಸರ್ಕಾರವು, ಅಂಥ ಶಿಫಾರಸ್ಸನ್ನು ಸ್ವೀಕರಿಸಿದ ಮೇಲೆ, 3ನೇ ಪ್ರಕರಣದ ಅನುಸಾರವಾಗಿ ಸಮಿತಿಯು ಹಾಗೆ ಶಿಫಾರಸ್ಸು ಮಾಡಿದ ಹೆಸರುಗಳನ್ನು ಅಧಿಸೂಚಿಸತಕ್ಕದ್ದು.

(2) ಸರ್ಕಾರವು, ಖಾಸಗಿ ಅನುದಾನಿತ ಸಂಸ್ಥೆಗಳಲ್ಲಿ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ಸಂಬಂಧದಲ್ಲಿ, ಪ್ರತ್ಯೇಕವಾಗಿ ಅಂಥ ಒಂದು ಸಮಿತಿಯನ್ನು ರಚಿಸತಕ್ಕದ್ದು.

(3) ಸಮಿತಿಯು, ತನ್ನ ಸ್ವಂತ ಕಾರ್ಯವಿಧಾನವನ್ನು ನಿರ್ಧರಿಸತಕ್ಕದ್ದು.

(4) ಅರ್ಹ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ಹೆಸರುಗಳನ್ನು ಶಿಫಾರಸ್ಸು ಮಾಡುವ ಮತ್ತು ಅಂಥ ಹೆಸರುಗಳನ್ನು ಅಧಿಸೂಚಿಸುವ ಇಡೀ ಪ್ರಕ್ರಿಯೆಯನ್ನು ಸಾಧ್ಯವಾದಷ್ಟು, ಈ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಒಂದು ವರ್ಷದ ಒಳಗೆ ಪೂರ್ಣಗೊಳಿಸತಕ್ಕದ್ದು.

(5) ನೇಮಕಾತಿ ಪ್ರಾಧಿಕಾರವು, (1)ನೇ ಉಪ ಪ್ರಕರಣದ ಅಡಿಯಲ್ಲಿ ಅಧಿಸೂಚಿಸಿದ ವ್ಯಕ್ತಿಗಳ ಪೂರ್ವ ವೃತ್ತಾಂತಗಳನ್ನು ಸತ್ಯಾಪನೆ ಮಾಡಿದ ತರುವಾಯ ಮತ್ತು ನೇಮಕಾತಿಯ ಸೂಕ್ತತೆಯನ್ನು ಪರಿಶೀಲಿಸಿದ ತರುವಾಯ, ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ 10 ಮತ್ತು 12ನೇ ನಿಯಮಗಳಿಗನುಸಾರವಾಗಿ ಅಧಿಸೂಚಿಸಿದ ಸಮಾನ ಖಾಲಿ ಹುದ್ದೆಯಲ್ಲಿ ಅವರನ್ನು ವಿಲೀನಗೊಳಿಸತಕ್ಕದ್ದು:

ಪರಂತು, ಖಾಸಗಿ ಅನುದಾನಿತ ಸಂಸ್ಥೆಗಳ ಸಂಬಂಧದಲ್ಲಿ, ಅಂಥ ಸಂಸ್ಥೆಗಳಲ್ಲಿನ ನೇಮಕಾತಿ ಪ್ರಾಧಿಕಾರವು, ಆ ಸಂಸ್ಥೆಗಳಲ್ಲಿ ಲಭ್ಯವಿರುವ ಖಾಲಿ ಸ್ಥಾನಗಳಲ್ಲಿ ಅನುದಾನಿತ ಸಂಸ್ಥೆಗಳ ಅಧಿಸೂಚಿತ ವ್ಯಕ್ತಿಗಳನ್ನು ನೇಮಕ ಮಾಡತಕ್ಕದ್ದು.

**5. ಈ ನಿಯಮಗಳ ಅಡಿಯಲ್ಲಿ ವಿಲೀನಗೊಂಡ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ವೇತನ ನಿಗದಿ ಜ್ಯೇಷ್ಠತೆ ಹಾಗೂ ರಜೆ.–** (1) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಅಥವಾ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) ಅಡಿಯಲ್ಲಿ ರಚಿಸಿದ ಅಥವಾ ರಚಿಸಲಾಗಿದೆ ಎಂದು ಭಾವಿಸಲಾದ ಸೇವಾ ಷರತ್ತುಗಳನ್ನು ನಿಯಂತ್ರಿಸುವ ಯಾವುದೇ ಇತರ ನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ, ವಿಲೀನಗೊಂಡ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರನು ಕರ್ತವ್ಯಕ್ಕೆ ಹಾಜರಾದ ನಂತರ, ಈ ಅಧಿನಿಯಮದ ಅಡಿಯಲ್ಲಿ ಆತನ ಪ್ರಾರಂಭಿಕ ಮೂಲ ವೇತನವನ್ನು, ಆತನು ವಿಲೀನಗೊಂಡ ಹುದ್ದೆಯ ಪ್ರವರ್ಗದ ಕಾಲಿಕ ವೇತನ ಶ್ರೇಣಿಯ ಕನಿಷ್ಠಕ್ಕೆ

ನಿಗದಿಗೊಳಿಸತಕ್ಕದ್ದು ಹಾಗೂ ತನ್ನ ವಿಲೀನಕ್ಕೆ ಮೊದಲು ಸಲ್ಲಿಸಿದ ಸೇವೆಯನ್ನು ವೇತನ, ಜ್ಯೇಷ್ಠತೆ ಹಾಗೂ ರಜೆ ಅಥವಾ ಪಿಂಚಣಿಗೆ ಸಂಬಂಧಿಸಿದಂತೆ ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ:

ಪರಂತು, ಖಾಸಗಿ ಅನುದಾನಿತ ಸಂಸ್ಥೆಗಳ ಸಂಬಂಧದಲ್ಲಿ, ಹಾಗೆ ನೇಮಕಗೊಂಡ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರು ಅನುದಾನಿತ ಸಂಸ್ಥೆಗಳಲ್ಲಿಯ ಅಂತಹುದೇ ಸೌಲಭ್ಯಗಳಿಗೆ ಅರ್ಹರಾಗಿರತಕ್ಕದ್ದು.

(2) ಈ ಅಧಿನಿಯಮದ ಅಡಿಯಲ್ಲಿ ವಿಲೀನಗೊಂಡ ವ್ಯಕ್ತಿಗಳ ಪರಸ್ಪರ ಜ್ಯೇಷ್ಠತೆಯನ್ನು, ಐದು ವರ್ಷಗಳು ಪೂರ್ಣಗೊಂಡ ದಿನಾಂಕದಿಂದ ಸದರಿ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ಸೇವಾವಧಿಗೆ ಅನುಸಾರವಾಗಿ ನಿರ್ಧರಿಸತಕ್ಕದ್ದು ಮತ್ತು ಇಬ್ಬರು ಅಥವಾ ಹೆಚ್ಚು ವ್ಯಕ್ತಿಗಳ ಸೇವಾವಧಿಯು ಒಂದೇ ಆಗಿದ್ದಲ್ಲಿ, ವಯಸ್ಸು ಹೆಚ್ಚಾದ ವ್ಯಕ್ತಿಯನ್ನು ವಯಸ್ಸಿನಲ್ಲಿ ಕಿರಿಯನಾದಂಥ ವ್ಯಕ್ತಿಗಿಂತ ಹಿರಿಯನೆಂಬಂತೆ ಪರಿಗಣಿಸತಕ್ಕದ್ದು.

**6. ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರನ ನೇಮಕಾತಿಯ ನಿಷೇಧ.–** (1) ಈ ಅಧಿನಿಯಮವು ಆರಂಭವಾದ ದಿನಾಂಕದಂದು ಐದು ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿರದ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರನನ್ನು, ಯಾವುದೇ ಸರ್ಕಾರಿ ಸೇವೆಯಲ್ಲಿ ಅಥವಾ ಯಾವುದೇ ಖಾಸಗಿ ಅನುದಾನಿತ ಸಂಸ್ಥೆಯಲ್ಲಿ ಮುಂದುವರೆಸತಕ್ಕದ್ದಲ್ಲ ಅಥವಾ ವಿಲೀನಗೊಳಿಸತಕ್ಕದ್ದಲ್ಲ.

(2) ಯಾವೊಬ್ಬ ವ್ಯಕ್ತಿಯನ್ನು, ಈ ಅಧಿನಿಯಮದ ಅಡಿಯಲ್ಲಿಯ ವಿಲೀನದ ಪ್ರಕ್ರಿಯೆಯು ಪೂರ್ಣಗೊಂಡ ದಿನಾಂಕದಂದು ಅಥವಾ ನಂತರ, ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರನಾಗಿ ನೇಮಕ ಮಾಡತಕ್ಕದ್ದಲ್ಲ ಅಥವಾ ಮುಂದುವರೆಸತಕ್ಕದ್ದಲ್ಲ.

(3) (1) ಮತ್ತು (2)ನೇ ಉಪಪ್ರಕರಣಗಳ ಉಪಬಂಧಗಳನ್ನು ಉಲ್ಲಂಘಿಸಿ, ಅರೆಕಾಲಿಕ ಆಧಾರದ ಮೇಲೆ ಯಾವೊಬ್ಬ ವ್ಯಕ್ತಿಯನ್ನು ನೇಮಕ ಮಾಡುವ ಅಥವಾ ತೊಡಗಿಸುವ ಯಾವೊಬ್ಬ ವ್ಯಕ್ತಿಯು ಅಥವಾ ನೇಮಕಾತಿ ಪ್ರಾಧಿಕಾರವು, ದುರ್ನಡತೆಯ ಶಿಸ್ತಿನ ಕ್ರಮಕ್ಕೆ ಬದ್ಧವಾಗತಕ್ಕದ್ದು.

**7. ಇತರ ನಿಯಮಗಳ ಅನ್ವಯ.–** ಕರ್ನಾಟಕ ಸಿವಿಲ್ ಸೇವಾ ನಿಯಮಗಳು, ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966 ಮತ್ತು ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) ಅಡಿಯಲ್ಲಿ ರಚಿಸಿದ ಅಥವಾ ರಚಿಸಲಾಗಿದೆಯೆಂದು ಭಾವಿಸಿದ ಸರ್ಕಾರಿ ನೌಕರರ ಸೇವಾ ಷರತ್ತುಗಳನ್ನು ವಿನಿಯಮಿಸುವ ಎಲ್ಲಾ ಇತರ ನಿಯಮಗಳು, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದಿರುವಷ್ಟರ ಮಟ್ಟಿಗೆ, ಈ ಅಧಿನಿಯಮದ ಅಡಿಯಲ್ಲಿ ಸರ್ಕಾರದಲ್ಲಿ ವಿಲೀನಗೊಂಡ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರಿಗೆ ಅನ್ವಯವಾಗತಕ್ಕದ್ದು:

ಪರಂತು, ಖಾಸಗಿ ಅನುದಾನಿತ ಸಂಸ್ಥೆಗಳಲ್ಲಿಯ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರ ಸಂಬಂಧದಲ್ಲಿ, ಈ ಅಧಿನಿಯಮದ ಅಡಿಯಲ್ಲಿ ಹಾಗೆ ವಿಲೀನಗೊಂಡ ವ್ಯಕ್ತಿಗಳು ಅನುದಾನಿತ ಸಂಸ್ಥೆಗಳ ನೌಕರರಿಗೆ ಅನ್ವಯವಾಗುವಂಥ ನಿಯಮಗಳಿಗೆ ಒಳಪಡತಕ್ಕದ್ದು.

**8. ಸದ್ಭಾವನೆಯಿಂದ ಕೈಗೊಂಡ ಕ್ರಮದ ಸಂರಕ್ಷಣೆ.–** ಈ ಅಧಿನಿಯಮದ ಅಡಿಯಲ್ಲಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಬೇಕಾದ ಯಾವುದೇ ಕಾರ್ಯದಲ್ಲಿ ಲೋಪ ಎಸಗಿದಲ್ಲಿ ಸರ್ಕಾರಿ ಅಧಿಕಾರಿಗಳ ವಿರುದ್ಧ, ಯಾವುದೇ ದಾವೆ, ವ್ಯಾಜ್ಯ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಹೂಡತಕ್ಕದ್ದಲ್ಲ.

**9. ನಿರ್ದೇಶನ ಮುಂತಾದವುಗಳನ್ನು ನೀಡುವ ಅಧಿಕಾರ.–** ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆಯು ಉದ್ಭವಿಸಿದಲ್ಲಿ, ಸರ್ಕಾರವು, ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದಂತೆ ತೊಂದರೆಗಳನ್ನು ನಿವಾರಿಸಲು ಅವಶ್ಯಕ ಅಥವಾ ಯುಕ್ತವೆಂದು ಕಂಡುಬರುವಂಥ ಉಪಬಂಧಗಳನ್ನು ರಚಿಸತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

2011–12ನೇ ಶೈಕ್ಷಣಿಕ ವರ್ಷದಿಂದ ವೃತ್ತಿ ಆಧಾರಿತ ಕೋರ್ಸುಗಳನ್ನು ಮುಚ್ಚುವುದರಿಂದಾಗಿ ಪದವಿಪೂರ್ವ ಶಿಕ್ಷಣದಲ್ಲಿರುವ ವೃತ್ತಿ ಆಧಾರಿತ ಕೋರ್ಸುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸಲು ಶಾಸನವೊಂದನ್ನು ಅಧಿನಿಯಮಿಸುವುದು ಹಾಗೂ ಈ ಮುಂದಿನವುಗಳಿಗಾಗಿ ಉಪಬಂಧ ಕಲ್ಪಿಸುವುದು ಕೂಡಾ ಅವಶ್ಯವೆಂದು ಪರಿಗಣಿಸಲಾಗಿದೆ,–

(1) ಸರ್ಕಾರಿ ವೃತ್ತಿ ಆಧಾರಿತ ಕೋರ್ಸುಗಳ ಸಂಸ್ಥೆಗಳಲ್ಲಿ ಐದು ವರ್ಷಗಳಿಗಿಂತ ಹೆಚ್ಚಾಗಿ ಅರೆಕಾಲಿಕ ನೌಕರರಾಗಿ ಕಾರ್ಯನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯನ್ನು ಯಾವುದೇ ಸರ್ಕಾರಿ ಇಲಾಖೆಯ ಖಾಲಿ ಹುದ್ದೆಗಳಲ್ಲಿ ವಿಲೀನಗೊಳಿಸುವುದು.

(2) ಖಾಸಗಿ ಅನುದಾನಿತ ಸಂಸ್ಥೆಗಳಲ್ಲಿ ಐದು ವರ್ಷಗಳಿಗಿಂತ ಹೆಚ್ಚಾಗಿ ಅರೆಕಾಲಿಕ ನೌಕರರಾಗಿ ಕಾರ್ಯನಿರ್ವಹಿಸುತ್ತಿರುವ, ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯನ್ನು, ಯಾವುದೇ ಖಾಸಗಿ ಅನುದಾನಿತ ವೃತ್ತಿ ಆಧಾರಿತ ಕೋರ್ಸು ಸಂಸ್ಥೆಗಳ ಖಾಲಿ ಹುದ್ದೆಗಳಲ್ಲಿ ವಿಲೀನಗೊಳಿಸುವುದು.

(3) ಇದಕ್ಕೆ ಸಂಬಂಧಿಸಿದ ಅಥವಾ ಆನುಷಂಗಿಕವಾದ ಕೆಲವು ಇತರ ವಿಷಯಗಳು.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನಾ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದ ವರ್ಷವೊಂದಕ್ಕೆ 47.00 ಕೋಟಿ ರೂಪಾಯಿಗಳಷ್ಟು ಅಂದಾಜು ವೆಚ್ಚವುಂಟಾಗುತ್ತದೆ.

**ವಿಶ್ವೇಶ್ವರ ಹೆಗಡೆ ಕಾಗೇರಿ**

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

**ಎಸ್.ಬಿ. ಪಾಟೀಲ್**

ಕಾರ್ಯದರ್ಶಿ

ಕರ್ನಾಟಕ ವಿಧಾನ ಸಭೆ

## KARNATAKA LEGISLATIVE ASSEMBLY

**THIRTEENTH LEGISLATIVE ASSEMBLY**
**NINTH SESSION**

# THE KARNATAKA PART TIME JOB ORIENTED COURSE EMPLOYEES ABSORPTION BILL, 2011

**(L.A. Bill No. 24 of 2011)**

A Bill to provide for absorption of the part time Job Oriented Course employees working in the job oriented courses in Pre-university Education in the State of Karnataka.

Whereas it is expedient to provide for absorption of part time Job Oriented Course employees working in the job oriented courses in Pre-university Education in the State and for the purposes hereinafter appearing;

Be it enacted by the Karnataka State Legislature in the Sixty Second year of the Republic of India, as follows:-

**1. Short title and commencement.-** (1) This Act may be called the Karnataka Part time Job Oriented Course Employees Absorption Act, 2011.

(2) It shall come into force at once.

**2. Definitions.-** In this Act, unless the context otherwise requires,-

(a) "Part time Job Oriented Course employee" means a person appointed,-

(i) as teaching staff of job oriented courses; or

(ii) as worker teacher in job oriented courses; or

(iii) as office Assistant in job oriented courses; or

(iv) as 'D' Group employees in job oriented courses

by the head of the Government or private aided Pre-university Colleges on part time or full time basis in accordance with G.O. No.DPAR 28 SBC 77, dt:4.3.1977, ED 64 TPU 76, dt:12.7.77 and ED 19 DGD 96 dt:9.3.99, 27.7.99 and 4.9.1999 and has worked as such and has completed five years of service and who is also working as such on the date of commencement of this Act.

(b) "Government" means the Government of Karnataka;

**3. Absorption of the part time Job Oriented Course employee.-** (1) Notwithstanding anything contained in any other law for the time being in force, the part time Job Oriented Course employees whose names are notified by the Government under this section, except those working in private aided institutions, shall be considered for absorption, on following the reservation policy of the State, in such category of equivalent vacant post and service in Pre-university Education service as may be specified therein, as a one time measure:

Provided that if sufficient number of vacant posts are not available in Pre-university Education service, the Government shall obtain the information regarding number of vacancies in equivalent posts available in other departments and then notify the eligible candidates to these posts:

Provided further that,-

(a) no part time Job Oriented Course employee shall be absorbed as above, unless he has discharged the duties of the post continuously as part time Job Oriented Course employee for not less than five years without any breaks in his service for the reasons which are directly attributable to him;

(b) no part time Job Oriented Course employee shall be absorbed unless he possessed the qualification prescribed for the post on the date of his absorption under the relevant rules of recruitment;

(c) the appointment shall not be made under this Act against any post earmarked to be filled from among candidates belonging to the Scheduled Castes or the Scheduled Tribes in accordance with the reservation or provided by or under any law or any order unless there are candidates belonging to those classes available from among the part time Job Oriented Course employees to be absorbed, otherwise such posts shall be treated as back-log to be filled by process of special recruitment from among these classes.

(2) In case of part time Job Oriented Course employees working in private aided institutions, the Government may direct the aided institutions to absorb the eligible persons against the suitable vacancies available or against the future vacancies in any private aided institutions.

**4. Procedure for absorption of part time Job Oriented Course employee.-** (1) The State Government shall constitute a Committee consisting of such number of members as it deems fit, for the purpose of recommending to the State Government, the names of part time Job Oriented Course employees, who fulfills the conditions specified in this Act and eligible for absorption. The State Government shall on receipt of such recommendation, notify the names so recommended by the Committee in accordance with section 3.

(2) The Government shall also constitute separately one such committee in respect of part time Job Oriented Course employees in private aided institutions.

(3) The Committee shall determine its own procedure.

(4) The entire process of recommendation of names of eligible part time Job Oriented Course employees and notifying such names shall as far as may be completed within one year from the date of commencement of this Act.

(5) The Appointing Authority shall after verifying the antecedents of the persons notified under sub-section (1) and after verifying the suitability for appointment shall absorb him in the notified equivalent vacant post in accordance with rules 10 and 12 of the Karnataka Civil Services (General Recruitment) Rules, 1977:

Provided that in respect of private aided institutions, the Appointing Authority in such institutions shall appoint the notified persons of aided institutions in the vacancies available in those institutions.

**5. Pay fixation, seniority and leave of part time Job Oriented Course employee absorbed under these rules.-** (1) Notwithstanding anything contained in any other law for the time being in force or any other rules governing conditions of service made or deemed to have been made under the Karnataka State Civil Services Act, 1978 (Karnataka Act 14 of 1990), the initial basic pay of an absorbed part time Job Oriented Course employees, under this Act after he reports to duty, shall be fixed at the minimum of the time scale of pay of the category of post in which he is absorbed and the services rendered before his absorption shall not be counted for the purposes of pay, seniority and leave or pension:

Provided that in respect of private aided institutions, the part time Job Oriented Course employees so appointed shall be eligible for similar benefits in aided institutions.

(2) The inter-se seniority of the persons absorbed under this Act shall be determined according to the length of service of the said part time Job Oriented Course employee from the date of completion of five years, and if the length of service of two or more persons is same, the older in age is treated as senior to the person who is younger in age.

**6. Prohibition of appointment of part time Job Oriented Course employee.-** (1) The part time Job Oriented Course employee who has not completed five years of service on the date of commencement of this Act shall not be continued or absorbed in any of the Government service or any private aided Institutions.

(2) No person shall be appointed or continued as part time Job Oriented Course employee on or after the date of completion of process of absorption under this Act.

(3) Any person or Appointing Authority appointing or engaging any person on part time basis by contravening the provisions of sub-sections (1) and (2) shall be liable for strict disciplinary action as misconduct.

**7. Application of other rules.-** The Karnataka Civil Services Rules, the Karnataka Civil Services (Conduct) Rules, 1966 and all other rules regulating the conditions of services of Government servants made or deemed to have been made under the Karnataka State Civil Services Act, 1978 (Karnataka Act 14 of 1990) shall, in so far as they are not inconsistent with the provisions of this Act, be applicable to the part time Job Oriented Course employees who get absorbed in Government under this Act:

Provided that in respect of part time Job Oriented Course employees in private aided institutions, the persons so absorbed under this Act shall be governed by such rules that are applicable to the aided institution employees.

**8. Protection of action taken in good faith.-** No suit, prosecution or other legal proceedings shall lie against the officers of the Government for anything done or omitted to be done in good faith under this Act.

**9. Power to issue direction etc.,-** If any difficulty arises in giving effect to the provisions of this Act, the Government may, by general or special order, make such provisions not inconsistent with the provisions of this Act as it appears to be necessary or expedient to remove the difficulty.

## STATEMENT OF OBJECTS AND REASONS

It is considered necessary to enact a legislation to absorb the part time Job Oriented Course employees working in the job oriented courses in Pre-university Education consequent upon the closer of Job Oriented Courses from the academic year 2011-12 and also provide for,-

(1) absorption of the teaching and non teaching staff, who have worked for more than five years as part time employees in Government JOC Institutions, in vacant posts of any of the Government Department.

(2) absorption of the teaching and non teaching staff, who have worked for more than five years in Private Aided Institutions as part time employees, in vacant posts of any of the Private Aided JOC Institutions.

(3) certain other matters connected therewith or incidental thereto.

Hence the, Bill.

## FINANCIAL MEMORANDUM

There will be an approximate expenditure to the extent of rupees 47.00 crores per annum by the proposed legislative measure.

**VISHVESHWARA HEGDE KAGERI**
Minister for Primary and
Secondary Education

**S.B. PATIL**
Secretary
Karnataka Legislative Assembly

# ವಿಶೇಷ ಪತ್ರಿಕೆ


| | | |
|---|---|---|
| ಭಾಗ – **IV-A** | ಬೆಂಗಳೂರು, ಬುಧವಾರ, ಮಾರ್ಚ್ ೧೬, ೨೦೧೧ (ಫಾಲ್ಗುಣ ೨೫, ಶಕ ವರ್ಷ ೧೯೩೨) | ನಂ. ೩೨೩ |


## KARNATAKA LEGISLATIVE ASSEMBLY SECRETARIAT

### NOTIFICATION

**No. KLA/LGA/26/Bill/2010, Bangalore, Dated: 16th March, 2011**

The following Bill was introduced in Legislative Assembly on 16.3.2011.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನಸಭೆ**

**ಒಂಭತ್ತನೇ ಅಧಿವೇಶನ**

## ಕರ್ನಾಟಕ ಪೌರನಿಗಮಗಳ ಮತ್ತು ಇತರ ಕೆಲವು ಕಾನೂನು (ತಿದ್ದುಪಡಿ) ವಿಧೇಯಕ, 2011

**(2011ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 26)**

ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976ನ್ನು ಮತ್ತು ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964ನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ನ್ನು (1977ರ ಕರ್ನಾಟಕ ಅಧಿನಿಯಮ 14) ಮತ್ತು ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964ನ್ನು (1964ರ ಕರ್ನಾಟಕ ಅಧಿನಿಯಮ 22) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಪೌರನಿಗಮಗಳು ಮತ್ತು ಇತರ ಕೆಲವು ಕಾನೂನು (ತಿದ್ದುಪಡಿ) ವಿಧೇಯಕ, 2011 ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು ಮತ್ತು ಈ ಅಧಿನಿಯಮದ ಬೇರೆ ಬೇರೆ ಉಪಬಂಧಗಳಿಗೆ ಬೇರೆ ಬೇರೆ ದಿನಾಂಕಗಳನ್ನು ಗೊತ್ತುಪಡಿಸಬಹುದು.

**2. 1977ರ ಕರ್ನಾಟಕ ಅಧಿನಿಯಮ 14ಕ್ಕೆ ತಿದ್ದುಪಡಿ.–** ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976 ರಲ್ಲಿ (1977ರ ಕರ್ನಾಟಕ ಅಧಿನಿಯಮ 14),–

(i) ಅಧ್ಯಾಯ IX ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"ಅಧ್ಯಾಯ IX ಎ**

**ಕರ್ನಾಟಕ ಸ್ವತ್ತು ತೆರಿಗೆ ಮಂಡಲಿಯ ಸ್ಥಾಪನೆ**

**102ಎ. ಪರಿಭಾಷೆ.–** ಈ ಅಧ್ಯಾಯದ ಉದ್ದೇಶಗಳಿಗಾಗಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) **'ಮಂಡಲಿ'** ಎಂದರೆ, ಕರ್ನಾಟಕ ಸ್ವತ್ತು ತೆರಿಗೆ ಮಂಡಲಿ;

(ಬಿ) **'ನಿಧಿ'** ಎಂದರೆ, ಕರ್ನಾಟಕ ಸ್ವತ್ತು ತೆರಿಗೆ ಮಂಡಲಿ ನಿಧಿ;

(ಸಿ) **'ಪೌರ ಸಭೆ'** ಎಂದರೆ, ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976ರ 3ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿಸಲಾದ ಒಂದು ಪೌರ ನಿಗಮ ಅಥವಾ ಕರ್ನಾಟಕ ಸಭೆಗಳ ಅಧಿನಿಯಮ, 1964ರ 10ನೇ ಪ್ರಕರಣದ ಅಡಿಯಲ್ಲಿ ನಿಗಮಿತವಾದ ಒಂದು ನಗರ ಅಥವಾ ಪಟ್ಟಣ ಪೌರ ಪರಿಷತ್ತು ಅಥವಾ 351ನೇ ಪ್ರಕರಣದ ಅಡಿಯಲ್ಲಿ ರಚಿಸಲಾದ ಪಟ್ಟಣ ಪಂಚಾಯ್ತಿ.

**102ಬಿ. ಅಧಿನಿಯಮವು ಇತರ ಕಾನೂನುಗಳಿಗಿಂತ ಹೆಚ್ಚಿನ ಪ್ರಭಾವ ಅಧ್ಯಾರೋಹಿವುಳ್ಳದ್ದಾಗಿರುವುದು.–** ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಪೌರಸಭೆ ಅಥವಾ ನಿಗಮವು ತೆರಿಗೆ ಸಂಬಂಧದಲ್ಲಿ ಮಂಡಲಿಯೊಡನೆ ಸಮಾಲೋಚಿಸಿದೆ ಯಾವುದೇ ವಲಯ, ಪ್ರದೇಶ ಅಥವಾ ಕಟ್ಟಡದ ಯಾವುದೇ ಸ್ವರೂಪ ಅಥವಾ ವರ್ಗಕ್ಕಾಗಿ ದರವನ್ನು ನಿರ್ಧರಿಸತಕ್ಕದ್ದಲ್ಲ.

**102ಸಿ. ಮಂಡಲಿಯ ಸ್ಥಾಪನೆ.–**(1) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಈ ಅಧ್ಯಾಯದ ಉದ್ದೇಶಗಳಿಗಾಗಿ **'ಕರ್ನಾಟಕ ಸ್ವತ್ತು ತೆರಿಗೆ ಮಂಡಲಿ'** ಎಂದು ಕರೆಯಲಾಗುವ ಒಂದು ಮಂಡಲಿಯನ್ನು ಸ್ಥಾಪಿಸತಕ್ಕದ್ದು.

(2) ಮಂಡಲಿಯು ಉತ್ತರಾಧಿಕಾರವುಳ್ಳ ಹಾಗೂ ಸಾಮಾನ್ಯ ಮೊಹರನ್ನು ಹೊಂದಿರುವ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಹಾಗೂ ಅದು ನಿಗಮದ ಹೆಸರಿನಲ್ಲಿ ದಾವೆಯನ್ನು ಹೂಡತಕ್ಕದ್ದು ಮತ್ತು ದಾವೆಗೆ ಒಳಗಾಗತಕ್ಕದ್ದು ಮತ್ತು ಯಾವುದೇ ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನು, ಅರ್ಜಿಸಲು, ಧಾರಣಮಾಡಲು ಹಾಗೂ ವಿಲೆ ಮಾಡಲು, ಕರಾರುಗಳನ್ನು ಮಾಡಿಕೊಳ್ಳಲು ಹಾಗೂ ಈ ಅಧಿನಿಯಮದ ಉದ್ದೇಶಗಳಿಗಾಗಿ ಅವಶ್ಯಕವಾದ ಎಲ್ಲ ಕಾರ್ಯಗಳನ್ನು ಮಾಡಲು ಸಕ್ಷಮವಾಗಿರತಕ್ಕದ್ದು.

(3) ಮಂಡಲಿಯ ಕೇಂದ್ರ ಕಾರ್ಯಸ್ಥಳವು ಬೆಂಗಳೂರಿನಲ್ಲಿ ಇರತಕ್ಕದ್ದು; ಅದರ ಶಾಖೆಗಳ ಅದು ಅವಶ್ಯಕವೆಂದು ಭಾವಿಸಬಹುದಾದ ಅಂಥ ಇತರ ಸ್ಥಳಗಳಲ್ಲಿ ಇರತಕ್ಕದ್ದು.

**102ಡಿ. ಮಂಡಲಿಯ ರಚನೆ.–** (1) ಮಂಡಲಿಯು, ರಾಜ್ಯ ಸರ್ಕಾರವು ನೇಮಕ ಮಾಡಬಹುದಾದಂತೆ ಒಬ್ಬ ಅಧ್ಯಕ್ಷರನ್ನು ಹಾಗೂ ಪದ ನಿಮಿತ್ತ ಸದಸ್ಯರನ್ನು ಒಳಗೊಂಡಂತೆ ನಾಲ್ಕಕ್ಕೆ ಮೀರದಷ್ಟು ಅಂಥ ಸಂಖ್ಯೆಯ ಸದಸ್ಯರನ್ನು ಒಳಗೊಂಡಿರತಕ್ಕದ್ದು.

(2) ಅಧ್ಯಕ್ಷರು, ಪದನಿಮಿತ್ತ ಕಾರ್ಯದರ್ಶಿಯು ಒಳಗೊಂಡಂತೆ, ಸರ್ಕಾರದ ಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಒಬ್ಬ ಅಧಿಕಾರಿಯಾಗಿದ್ದ ಅಥವಾ ಅಧಿಕಾರಿಯಾಗಿರುವ ಒಬ್ಬ ವ್ಯಕ್ತಿಯಾಗಿರತಕ್ಕದ್ದು:

ಪರಂತು, ಪೌರಾಡಳಿತ, ಸ್ವತ್ತುಗಳ ಮೌಲ್ಯಮಾಪನ, ಲೆಕ್ಕಪದ್ಧತಿ, ಕಾನೂನು ಹಾಗೂ ನಗರ ಯೋಜನೆಯಂಥ ಕ್ಷೇತ್ರಗಳಲ್ಲಿ ಜ್ಞಾನ ಮತ್ತು ಅನುಭವವನ್ನು ಹೊಂದಿರುವ ವ್ಯಕ್ತಿಗಳ ಪೈಕಿಯಿಂದ ರಾಜ್ಯ ಸರ್ಕಾರವು ನಿಯಮಿಸಬಹುದಾದಂತೆ, ಇಬ್ಬರಿಗೆ ಮೀರದಷ್ಟು ಸದಸ್ಯರು ಇರತಕ್ಕದ್ದು.

(3) ಮಂಡಲಿಯ ಅಧ್ಯಕ್ಷರು ಮತ್ತು ಸದಸ್ಯರುಗಳ ಐದು ವರ್ಷಗಳ ಅವಧಿಯವರೆಗೆ ಪದಧಾರಣವನ್ನು ಮಾಡತಕ್ಕದ್ದು:

ಪರಂತು, ಅಧ್ಯಕ್ಷರ ಅಥವಾ ಸದಸ್ಯರ ಪದಾವಧಿಯು ಮುಕ್ತಾಯವಾದ ಮೇಲೆ ಅವನು ಅಧ್ಯಕ್ಷ ಅಥವಾ ಸದಸ್ಯನಾಗಿ ಮರು ನೇಮಕಗೊಳ್ಳಲು ಅರ್ಹನಾಗತಕ್ಕದ್ದಲ್ಲ ಮತ್ತು ರಾಜ್ಯ ಸರ್ಕಾರದಿಂದ ಅಥವಾ ರಾಜ್ಯ ಸರ್ಕಾರದಿಂದ ಅಥವಾ ಅದರ ನಿಯಂತ್ರಣದಲ್ಲಿರುವ ಯಾವುದೇ ನಿಗಮ, ಕಂಪನಿ, ಸಂಘ ಅಥವಾ ವಿಶ್ವವಿದ್ಯಾಲಯದ ಯಾವುದೇ ಲಾಭದಾಯಕ ಹುದ್ದೆಗೆ ನೇಮಕಗೊಳ್ಳಲು ಅರ್ಹನಾಗತಕ್ಕದ್ದಲ್ಲ.

(4) ಮಂಡಲಿಯ ಅಧ್ಯಕ್ಷರು ಮತ್ತು ಸದಸ್ಯರ ಸಂಬಳಗಳು ಮತ್ತು ಭತ್ಯೆಗಳು ಒಳಗೊಂಡಂತೆ, ಅವರ ಸೇವಾ ನಿಬಂಧನೆಗಳು ಹಾಗೂ ಷರತ್ತುಗಳು, ರಾಜ್ಯ ಸರ್ಕಾರವು ನಿಯಮಿಸಬಹುದಾದಂತ ಇರತಕ್ಕದ್ದು.

**102ಇ. ಸಿಂಧುತ್ವ.–** ಈ ಅಧ್ಯಾಯದಲ್ಲಿ ಏನೇ ಒಳಗೊಂಡಿದ್ದರೂ, ಮಂಡಲಿಯ ಯಾವುದೇ ಕಾರ್ಯವು ಮಂಡಲಿಯ ಸದಸ್ಯರ ಪದದಲ್ಲಿಯ ಯಾವುದೇ ರಿಕ್ತತೆ ಇರುವ ಕಾರಣ ಮಾತ್ರದಿಂದಲೇ ಅಸಿಂಧುವಾಗತಕ್ಕದ್ದಲ್ಲ ಅಥವಾ ಅನ್ಯಥಾ ಅಲ್ಲ.

**102ಎಫ್. ಮಂಡಲಿಯ ಪ್ರಕಾರ್ಯಗಳು.–** ಮಂಡಲಿಯು ಈ ಮುಂದಿನ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ:–

(ಎ) ರಾಜ್ಯದಲ್ಲಿಯ ಪೌರಸಭೆಗಳಲ್ಲಿಯ ವಲಯಗಳಲ್ಲಿ ಅಥವಾ ಪ್ರದೇಶಗಳಲ್ಲಿ ಇರುವ ಎಲ್ಲಾ ವರ್ಗಗಳ ಸ್ವತ್ತುಗಳನ್ನು ಹಾಗೂ ಚಾಲ್ತಿಯಲ್ಲಿರುವ ದರಗಳನ್ನು ಲೆಕ್ಕ ಹಾಕುವುದು ಅಥವಾ ಲೆಕ್ಕಹಾಕುವಂತೆ ಮಾಡುವುದು ಮತ್ತು ದತ್ತಾಂಶಗಳನ್ನು ಅಭಿವೃದ್ಧಿ ಪಡಿಸುವುದು;

(ಬಿ) ತೆರಿಗೆ ಪದ್ಧತಿಯನ್ನು ಪುನರೀಕ್ಷಿಸುವುದು ಮತ್ತು ಸ್ವತ್ತುಗಳ ಮೂಲ ಬಂಡವಾಳ ಮೌಲ್ಯಮಾಪನಕ್ಕೆ ಅಥವಾ ವಾರ್ಷಿಕ ತೆರಿಗೆಗೆ ಗುರಿಯಾಗುವ ಮೌಲ್ಯಕ್ಕೆ ಸೂಕ್ತ ಆಧಾರಗಳನ್ನು ಸೂಚಿಸುವುದು;

(ಸಿ) ಸ್ವತ್ತುಗಳ ಮೂಲ ಬಂಡವಾಳ ಮೌಲ್ಯಮಾಪನ ಅಥವಾ ವಾರ್ಷಿಕ ತೆರಿಗೆಗೆ ಗುರಿಯಾಗುವ ಮೌಲ್ಯವನ್ನು ನಿರ್ಧರಿಸುವುದಕ್ಕಾಗಿ ಪಾರದರ್ಶಕ ಕಾರ್ಯವಿಧಾನವನ್ನು ರೂಪಿಸುವುದು ಮತ್ತು ರಚಿಸುವುದು;

(ಡಿ) ಪೌರಸಭೆಗಳ ಕಟ್ಟಡಗಳ ಅಥವಾ ಪ್ರದೇಶದ ಅಥವಾ ವಲಯಗಳ ವಿವಿಧ ವರ್ಗಗಳಿಗಾಗಿ ತೆರಿಗೆ ದರವನ್ನು ಶಿಫಾರಸ್ಸು ಮಾಡುವುದು;

(ಇ) ನಿಯತಕಾಲಿಕ ಪುನರೀಕ್ಷಣೆಗಾಗಿ ವಿಧಿ ವಿಧಾನಗಳು ಅಥವಾ ಆಧಾರಗಳನ್ನು ಶಿಫಾರಸ್ಸು ಮಾಡುವುದು;

(ಎಫ್) ಯಾವುದೇ ವಲಯ, ಪ್ರದೇಶ ಅಥವಾ ಕಟ್ಟಡದ ಯಾವುದೇ ವರ್ಗಕ್ಕಾಗಿ ದರಗಳನ್ನು ತೀರ್ಮಾನಿಸುವಲ್ಲಿ ಪೌರಸಭೆಗೆ ನೆರವು ನೀಡತಕ್ಕದ್ದು;

(ಜಿ) ಮೂಲ ಬಂಡವಾಳ ಮೌಲ್ಯಮಾಪನ ಪ್ರಕ್ರಿಯೆ ಅಥವಾ ವಾರ್ಷಿಕ ತೆರಿಗೆಗೆ ಗುರಿಯಾಗುವ ಮೌಲ್ಯದಲ್ಲಿ, ಪಾರದರ್ಶಕತೆಯನ್ನು ಮತ್ತು ಅವುಗಳ ಸೂಕ್ತ ಹೋಲಿಕೆಗಾಗಿ ಬಹಿರಂಗಗೊಳಿಸುವ ವ್ಯವಸ್ಥೆಯನ್ನು ಖಚಿತ ಪಡಿಸಿಕೊಳ್ಳುವುದು;

(ಎಚ್) ಕಾರ್ಯ ಯೋಜನೆಯನ್ನು ರಾಜ್ಯಪತ್ರದಲ್ಲಿ ಪ್ರಕಟಿಸುವುದು;

(ಐ) ಮಂಡಲಿಯು, ಕರ್ನಾಟಕ ಸ್ಟಾಂಪು ಅಧಿನಿಯಮ, 1957ರ 45ಬಿ ಪ್ರಕರಣದ ಅಡಿಯಲ್ಲಿ ಉಪಬಂಧಿಸಲಾದ ಮಾರ್ಗಸೂಚಿಗಳಿಗೆ ಅನುಸಾರವಾಗಿ, ಮಾರುಕಟ್ಟೆ ಮೌಲ್ಯವನ್ನು ಆಧರಿಸಿ ಸ್ವತ್ತು ತೆರಿಗೆಯನ್ನು ವಿಧಿಸುವ ಮತ್ತು ಸಂಗ್ರಹಿಸುವ ಉದ್ದೇಶಕ್ಕಾಗಿ ಮಾರುಕಟ್ಟೆ ಮೌಲ್ಯ ಮಾರ್ಗಸೂಚಿಗಳನ್ನು ನಿರ್ಧರಿಸುವುದಕ್ಕಾಗಿ ಶಿಫಾರಸ್ಸುಗಳನ್ನು ಮಾಡುವುದು;

(ಜೆ) ಮಂಡಲಿಯು, ಭೂಮಿ ಮತ್ತು ಕಟ್ಟಡದ ಮೌಲ್ಯಮಾಪನದಲ್ಲಿ ತಜ್ಞತೆಯನ್ನು ಹೆಚ್ಚಿಸುವುದೂ ಒಳಗೊಂಡಂತೆ; ಮೌಲ್ಯಮಾಪನದ ಕ್ಷೇತ್ರದಲ್ಲಿ ಅಂಥ ಇತರ ಪ್ರಕಾರ್ಯಗಳನ್ನು ಸಹ ನಿರ್ವಹಿಸುವುದು;

(ಕೆ) ರಾಜ್ಯ ಸರ್ಕಾರವು ನಿರ್ದೇಶಿಸಬಹುದಾಂತೆ ಅಥವಾ ಮಂಡಲಿಯು ಈ ಅಧ್ಯಾಯದ ಉದ್ದೇಶಗಳನ್ನು ಜಾರಿಗೊಳಿಸುವುದಕ್ಕಾಗಿ ತಾನು ಅವಶ್ಯವೆಂದು ಪರಿಗಣಿಸಬುದಾದಂತೆ, ನಿಗಮ ಮತ್ತು ಪೌರಸಭೆಗಳ ಅಧಿಕಾರಿಗಳು ಹಾಗೂ ನೌಕರರಿಗೆ ನೇರವಾಗಿಯಾಗಲಿ ಅಥವಾ ಯಾವುದೇ ಸಂಸ್ಥೆಯ ಮೂಲಕವಾಗಿಯಾಗಲಿ ತರಬೇತಿಯನ್ನು ನೀಡುವುದು; ಮತ್ತು

(ಎಲ್) ನಿಯಮಿಸಬಹುದಾದ ಅಂಥ ಇತರ ಪ್ರಕಾರ್ಯಗಳು.

**102ಜಿ. ಕರಡು ಮೌಲ್ಯಮಾಪನ ದರಗಳ ಪ್ರಕಟಣೆ.**–(1) ಯಾವುದೇ ಪೌರಸಭೆಯ ಯಾವುದೇ ವರ್ಗದ ಭೂಮಿಗಳ ಮತ್ತು ಕಟ್ಟಡಗಳ ಅಥವಾ ಯಾವುದೇ ಪ್ರದೇಶದ ಅಥವಾ ವಲಯದ ಮಾಲ್ಯಮಾಪನವನ್ನು ನಿರ್ಧರಿಸಿದ ಮೇಲೆ ಮಂಡಲಿಯು, ಕರಡು ಮೌಲ್ಯಮಾಪನ ದರಗಳನ್ನು ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಪ್ರಕಟಿಸುವಂತೆ ಮಾಡತಕ್ಕದ್ದು ಮತ್ತು ಕರಡು ಮೌಲ್ಯಮಾಪನ ದರಗಳಿಗೆ ಸಲಹೆಗಳನ್ನು ಸಲ್ಲಿಸುವುದರ ಸಂಬಂಧದಲ್ಲಿ ಮೂವತ್ತು ದಿನಗಳಿಗೆ ಕಡಿಮೆಯಲ್ಲದಂತೆ ಒಂದು ದಿನಾಂಕವನ್ನು, ನಿರ್ದಿಷ್ಟಪಡಿಸಬಹುದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ ನಿರ್ದಿಷ್ಟಪಡಿಸಿದ ದಿನಾಂಕವು ಮುಗಿದ ಮೇಲೆ ಮತ್ತು ತದನಂತರ ನಿಯಮಿಸಬಹುದಾದ ಅಂಥ ಅವಧಿಯೊಳಗೆ ಕರಡು ಮೌಲ್ಯಮಾಪನ ದರಗಳ ಮೇಲಿನ ಸಲಹೆಗಳನ್ನು ಮಂಡಲಿಯು ಪರಿಗಣಿಸತಕ್ಕದ್ದು.

(3) ಸಲಹೆಗಳನ್ನು, ಯಾವುದಾದರು ಇದ್ದಲ್ಲಿ, ಪರಿಗಣಿಸಿದ ಮೇಲೆ ಮಂಡಲಿಯು ಅಂತಿಮ ಮೌಲ್ಯಮಾಪನ ದರಗಳನ್ನು ತಯಾರಿಸತಕ್ಕದ್ದು ಮತ್ತು ಯಾವುದೇ ಪ್ರದೇಶ ಅಥವಾ ವಲಯದ ಅಥವಾ ಯಾವುದೇ ವರ್ಗದ ಕಟ್ಟಡದ ಸಂಬಂಧದಲ್ಲಿ ಅಂತಿಮ ದರಗಳನ್ನು ಪೌರಸಭೆಗೆ ಶಿಫಾರಸ್ಸು ಮಾಡತಕ್ಕದ್ದು.

**102ಎಚ್. ಸಿಬ್ಬಂದಿಯ ನೇಮಕಾತಿ.**– (1) ಮಂಡಲಿಯು, ವಿನಿಯಮಗಳ ಮೂಲಕ ಮಂಡಲಿಯ ನೌಕರರ ನೇಮಕಾತಿ ವಿಧಾನ ಮತ್ತು ಸೇವಾ ಷರತ್ತುಗಳಿಗಾಗಿ ಉಪಬಂಧಗಳನ್ನು ಕಲ್ಪಿಸಬಹುದು.

(2) ಈ ಸಂಬಂಧದಲ್ಲಿ ರಚಿಸಿದ ವಿನಿಯಮಗಳ ಮೂಲಕ ನಿರ್ದಿಷ್ಟಪಡಿಸಿದ ಅಂಥ ಸೇವಾ ಷರತ್ತುಗಳಿಗೆ ಒಳಪಟ್ಟು, ಮಂಡಲಿಯು, ಒಬ್ಬ ಕಾರ್ಯದರ್ಶಿಯನ್ನು ಮತ್ತು ಈ ಅಧಿನಿಯಮದ ಅಡಿಯಲ್ಲಿ ಅದರ ಪ್ರಕಾರ್ಯಗಳನ್ನು ನೆರವೇರಿಸುವುದಕ್ಕಾಗಿ ಮಂಡಲಿಗೆ ಅಗತ್ಯವಾಗಬಹುದಾದ ಅಂಥ ಇತರ ಅಧಿಕಾರಿಗಳನ್ನು ನೇಮಕ ಮಾಡಬಹುದು.

**102ಐ. ಪೌರಸಭೆ ಅಥವಾ ಯಾವುದೇ ಇತರ ಸ್ಥಳೀಯ ಪ್ರಾಧಿಕಾರದ ಸಿಬ್ಬಂದಿಯ ನೇಮಕಾತಿ.**– ಮಂಡಲಿಯು, ವಿನಿಯಮಗಳ ಮೂಲಕ ನಿರ್ಧರಿಸಬಹುದಾದ ಅಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ, ಪೌರಸಭೆಯ ಅಥವಾ ಸಂದರ್ಭಾನುಸಾರವಾಗಿ ಯಾವುದೇ ಇತರ ಸ್ಥಳೀಯ ಪ್ರಾಧಿಕಾರದ ಅಂಥ ಸಂಖ್ಯೆಯ ಸಿಬ್ಬಂದಿಯನ್ನು ಪ್ರತಿನಿಯೋಜನೆಯ ಮೇಲೆ ನೇಮಕ ಮಾಡಿಕೊಳ್ಳಬಹುದು.

**102ಜೆ. ಮಂಡಲಿಯ ನಿಧಿಗಳು.**– (1) ಮಂಡಲಿಯು, 'ರಾಜ್ಯ ಸ್ವತ್ತು ತೆರಿಗೆ ಮಂಡಲಿ ನಿಧಿ' ಎಂದು ಕರೆಯಲಾಗುವ ಒಂದು ನಿಧಿಯನ್ನು ಹೊಂದಿರತಕ್ಕದ್ದು ಮತ್ತು ಇದರಲ್ಲಿ,–

(ಎ) 102ಎಲ್ ಪ್ರಕರಣದ ಅಡಿಯಲ್ಲಿ ಪೌರಸಭೆ ಮತ್ತು ಇತರ ಸ್ಥಳೀಯ ಪ್ರಾಧಿಕಾರಗಳು ಮಂಡಲಿಗೆ ಸಂದಾಯ ಮಾಡಬಹುದಾದ ಅಂಥ ಹಣವನ್ನು; ಮತ್ತು

(ಬಿ) ರಾಜ್ಯ ಸರ್ಕಾರವು ಅಥವಾ ಯಾವುದೇ ಇತರ ಪ್ರಾಧಿಕಾರ ಅಥವಾ ಏಜೆನ್ಸಿಯು ಮಂಡಲಿಗೆ ಸಂದಾಯ ಮಾಡಬಹುದಾದ ಅಂಥ ಹಣವನ್ನು,

– ಜಮೆ ಮಾಡತಕ್ಕದ್ದು.

(2) ಮಂಡಲಿಯು ಸ್ವೀಕರಿಸಿದ ಎಲ್ಲಾ ಹಣವನ್ನು ನಿಯಮಿಸಬಹುದಾದಂಥ ಒಂದು ಅಥವಾ ಹೆಚ್ಚಿನ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಠೇವಣಿ ಇಡತಕ್ಕದ್ದು.

**102ಕೆ. ಮಂಡಲಿಗೆ ಅನುದಾನಗಳು ಅಥವಾ ಸಾಲಗಳು.–** ರಾಜ್ಯ ಸರ್ಕಾರವು ನಿರ್ಧರಿಸಬಹುದಾದ ಅಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಮಂಡಲಿಗೆ ರಾಜ್ಯ ಸರ್ಕಾರವು ಅನುದಾನಗಳನ್ನು ನೀಡಬಹುದು.

**102ಎಲ್. ಪೌರಸಭೆಗಳು ಮಂಡಲಿಗೆ ಸಂದಾಯ ಮಾಡುವುದು.–** ಈ ಸಂಬಂಧದಲ್ಲಿ ಮಾಡಿದ ನಿಯಮಗಳಿಗೆ ಒಳಪಟ್ಟು, ಪ್ರತಿಯೊಂದು ಪೌರಸಭೆಯ ಅಥವಾ ಸಂದರ್ಭಾನುಸಾರವಾಗಿ ಯಾವುದೇ ಇತರ ಸ್ಥಳೀಯ ಪ್ರಾಧಿಕಾರವು, 102ಎಫ್ ಪ್ರಕರಣದ ಅಡಿಯಲ್ಲಿ ಮಂಡಲಿಯು, ನಿಯಮಿಸಲಾದಂತೆ ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವುದಕ್ಕಾಗಿವಹಿಸಿದ, ವೆಚ್ಚದ ಅಂಥ ಭಾಗವಾಗಿ ಮಂಡಲಿಗೆ ಸಂದಾಯ ಮಾಡತಕ್ಕದ್ದು.

**102ಎಂ. ವಾರ್ಷಿಕ ವರದಿ.–** ಮಂಡಲಿಯು, ರಾಜ್ಯ ಸರ್ಕಾರವು ನಿಯಮಿಸಬಹುದಾದ ಅಂಥ ವಿಧಾನದಲ್ಲಿ, ವರ್ಷದಲ್ಲಿಯ ತನ್ನ ಚಟುವಟಿಕೆಗಳ ಬಗ್ಗೆ ಒಂದು ವಾರ್ಷಿಕ ವರದಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ವಾರ್ಷಿಕ ವರದಿಯನ್ನು ರಾಜ್ಯ ವಿಧಾನ ಮಂಡಲದ ಮುಂದೆ ಮಂಡಿಸತಕ್ಕದ್ದು.

**102ಎನ್. ಸಾದಿಲ್ವಾರು ವೆಚ್ಚಗಳು ಒಳಗೊಂಡಂತೆ ಸಂಬಳಗಳು ಮತ್ತು ಭತ್ಯೆಗಳಿಗಾಗಿ ಮಾಡಿದ ವೆಚ್ಚ.–** (1) ಮಂಡಲಿಯು, ಅಧ್ಯಕ್ಷರು, ಸದಸ್ಯರು, ಕಾರ್ಯದರ್ಶಿ, ಅಧಿಕಾರಿಗಳು ಮತ್ತು ಮಂಡಲಿಯ ಅಡಿಯಲ್ಲಿ ಮತ್ತು ಅದಕ್ಕಾಗಿ ಸೇವೆ ಸಲ್ಲಿಸುತ್ತಿರುವ ನೌಕರರ ಸಂಬಳ ಮತ್ತು ಭತ್ಯೆಗಿಗಾಗಿ, ಸಾದಿಲ್ವಾರು ಒಳಗೊಂಡಂತೆ, ಮಾಡಿದ ವೆಚ್ಚವನ್ನು ಮಂಡಲಿಯ ನಿಧಿಯಿಂದ ಭರಿಸತಕ್ಕದ್ದು.

(2) ಮಂಡಲಿಯ ಸಾಮಾನ್ಯ ಚಟುವಟಿಕೆಗಳನ್ನು ಕೈಗೊಳ್ಳುವುದಕ್ಕಾಗಿ ಸಾದಿಲ್ವಾರು ಸಂಬಂಧದಲ್ಲಿಯ ವೆಚ್ಚವನ್ನು ಮಂಡಲಿಯ ನಿಧಿಯಿಂದ ಭರಿಸತಕ್ಕದ್ದು.

**102ಓ. ಆಯವ್ಯಯ ಪತ್ರ (ಬಜೆಟ್).–** ಮಂಡಲಿಯು, ಪ್ರತಿವರ್ಷವು ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಮತ್ತು ಅಂಥ ಅವಧಿಯೊಳಗೆ ಮುಂಬರುವ ಆರ್ಥಿಕ ವರ್ಷಕ್ಕಾಗಿ ಅಂದಾಜು ಮಾಡಲಾದ ಸ್ವೀಕೃತಿಗಳು ಮತ್ತು ವೆಚ್ಚಗಳನ್ನು ತೋರಿಸುವ ಒಂದು ಆಯವ್ಯಯ ಪತ್ರವನ್ನು ತಯಾರಿಸತಕ್ಕದ್ದು ಮತ್ತು ಅದನ್ನು ಅನುಮೋದನೆಗಾಗಿ ರಾಜ್ಯ ಸರ್ಕಾರಕ್ಕೆ ಅದರ ಪ್ರತಿಯನ್ನು ಕಳುಹಿಸತಕ್ಕದ್ದು.

(2) ರಾಜ್ಯ ಸರ್ಕಾರವು ಅಂಥ ಅನುಮೋದನೆಯನ್ನು ನೀಡಬಹುದು ಮತ್ತು ತಾನು ಸೂಕ್ತವೆಂದು ಭಾವಿಸುವಂತೆ ಅದಕ್ಕೆ ಅಂಥ ಸೇರ್ಪಡೆಗಳು, ಬದಲಾವಣೆಗಳು ಮತ್ತು ಮಾರ್ಪಾಡುಗಳನ್ನು ಮಾಡಬಹುದು.

**102ಪಿ. ವೆಚ್ಚ ಮತ್ತು ಲೆಕ್ಕಪತ್ರಗಳು.–** (1) ಮಂಡಲಿಯು, ರಾಜ್ಯ ಸರ್ಕಾರದ ಇಲಾಖಾ ಕಾರ್ಯದರ್ಶಿಯವರು ಚಲಾಯಿಸುವಂತಹುದೇ ಹಣಕಾಸು ಅಧಿಕಾರಗಳನ್ನು ಹೊಂದಿರತಕ್ಕದ್ದು. ಮಂಡಲಿಯು, ಅಂಥ ಹಣಕಾಸು ಅಧಿಕಾರವನ್ನು ಮೀರಿದ ವಿಷಯಗಳನ್ನು ತೀರ್ಮಾನಕ್ಕಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(2) ಮಂಡಲಿಯು, ಎಲ್ಲಾ ಸ್ವೀಕೃತಿಗಳು ಮತ್ತು ವೆಚ್ಚದ ಲೆಕ್ಕಪತ್ರಗಳನ್ನು ಇಡತಕ್ಕದ್ದು ಮತ್ತು ಲೆಕ್ಕಪತ್ರಗಳನ್ನು ಇಡುವ ಗುಣಮಟ್ಟ ನಿಯಮಗಳಿಗೆ ಅನುಸಾರ ಕ್ರಮಬದ್ಧ ರೀತಿಯಲ್ಲಿ ಅಥವಾ ನಿಯಮಿಸಬಹುದಾದಂಥ ರೀತಿಯಲ್ಲಿ ವಾರ್ಷಿಕ ಲೆಕ್ಕಪತ್ರವನ್ನು ತಯಾರಿಸತಕ್ಕದ್ದು.

**102ಕ್ಯೂ. ಲೆಕ್ಕಪರಿಶೋಧನೆ.–(1)** ಮಂಡಲಿಯು, ತನ್ನ ಲೆಕ್ಕಪತ್ರಗಳನ್ನು ರಾಜ್ಯ ಸರ್ಕಾರವು ನೇಮಿಸುವ ಲೆಕ್ಕಪರಿಶೋಧಕರಿಂದ ವಾರ್ಷಿಕವಾಗಿ ಪರಿಶೋಧನೆ ಮಾಡಿಸತಕ್ಕದ್ದು ಮತ್ತು ಹಾಗೆ ನೇಮಕವಾದ ಲೆಕ್ಕಪರಿಶೋಧಕರು, ಮಂಡಲಿಯ ಪುಸ್ತಕಗಳು, ದಾಖಲೆಗಳು ಮತ್ತು ಇತರ ಕಾಗದ ಪತ್ರಗಳನ್ನು ಒದಗಿಸುವುದನ್ನು ಒತ್ತಾಯ ಮಾಡುವ ಅಧಿಕರವನ್ನು ಹೊಂದಿರತಕ್ಕದ್ದು.

(2) 102ಪಿ ಪ್ರಕರಣದ (2)ನೇ ಉಪಪ್ರಕರಣದ ಅಡಿಯಲ್ಲಿ ತಯಾರಿಸಲಾದ ವಾರ್ಷಿಕ ಲೆಕ್ಕಪತ್ರಗಳನ್ನು, ಲೆಕ್ಕಪರಿಶೋಧನೆಗಾಗಿ ಲೆಕ್ಕಪರಿಶೋಧಕರಿಗೆ ಸಲ್ಲಿಸತಕ್ಕದ್ದು. ಲೆಕ್ಕಪತ್ರಗಳು ಲೆಕ್ಕಪರಿಶೋಧನೆಯಾದ ಕೂಡಲೇ ಮಂಡಲಿಯು, ಅದರ ಪ್ರತಿಯನ್ನು, ಲೆಕ್ಕಪರಿಶೋಧಕರ ವರದಿಯ ಪ್ರತಿಯೊಂದಿಗೆ, ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(3) ಲೆಕ್ಕಪರಿಶೋಧಕರ ವರದಿಯ ಪರಿಶೀಲನೆಯ ತರುವಾಯ, ರಾಜ್ಯ ಸರ್ಕಾರವು ಈ ಸಂಬಂಧದಲ್ಲಿ ನಿರ್ದೇಶನಗಳನ್ನು ಹೊರಡಿಸುವುದು ಸೂಕ್ತವೆಂದು ಭಾವಿಸುವ ಅಂಥ ನಿರ್ದೇಶನಗಳನ್ನು ಮಂಡಲಿಯು ಪಾಲಿಸತಕ್ಕದ್ದು.

(4) ಮಂಡಲಿಯು, ಅಂಥ ಲೆಕ್ಕಪರಿಶೋಧನೆಗಾಗಿ, ಶುಲ್ಕದ ರೂಪದಲ್ಲಿ ಸಂದಾಯ ಮಾಡಬೇಕಾದ ಮೊತ್ತ ಯಾವುದಾದರೂ ಇದ್ದಲ್ಲಿ, ರಾಜ್ಯ ಸರ್ಕಾರವು ನಿರ್ಧರಿಸಬಹುದಾದಂತೆ ಅಂಥ ಮೊತ್ತವನ್ನು ನಿಧಿಯಿಂದ, ಸಂದಾಯ ಮಾಡತಕ್ಕದ್ದು.

**102ಆರ್. ಅಧಿಕಾರಗಳ ಪ್ರತ್ಯಾಯೋಜನೆ.–** (1) ರಾಜ್ಯ ಸರ್ಕಾರವು ರಚಿಸಿದ ನಿಯಮಗಳಿಗೆ ಒಳಪಟ್ಟು, ಮಂಡಲಿಯು ನಿಯಮಗಳನ್ನು ರಚಿಸುವ ಅಧಿಕಾರವನ್ನು ಹೊರತುಪಡಿಸಿ, ಹಣಕಾಸು ಅಧಿಕಾರಗಳು ಒಳಗೊಂಡಂತೆ ತನ್ನ ಯಾವುವೇ ಅಧಿಕಾರಗಳನ್ನು ಮತ್ತು ಕರ್ತವ್ಯಗಳನ್ನು ಮಂಡಲಿಯ ಅಧ್ಯಕ್ಷರಿಗೆ ಪ್ರತ್ಯಾಯೋಜಿಸಬಹುದು.

(2) ಮಂಡಲಿಯು, ಈ ಸಂಬಂಧದಲ್ಲಿ ತಾನು ತೆಗೆದುಕೊಂಡ ನಿರ್ಣಯದ ಮೂಲಕ, ಮಂಡಲಿಯ ಯಾವುವೇ ಇತರ ಅಧಿಕಾರಿಗಳಿಗೆ ಕೂಡಾ ತನ್ನ ಯಾವುದೇ ಅಧಿಕಾರಗಳನ್ನು ಮತ್ತು ಕರ್ತವ್ಯಗಳನ್ನು ಪ್ರತ್ಯಾಯೋಜಿಸಬಹುದು.

**102ಎಸ್. ಸದಸ್ಯ, ಅಧಿಕಾರಿಗಳು ಮತ್ತು ನೌಕರರು ಸಾರ್ವಜನಿಕ ನೌಕರರಾಗಿರುವುದು.–** ಮಂಡಲಿಯ ಪ್ರತಿಯೊಬ್ಬ ಸದಸ್ಯನು ಅಥವಾ ಮಂಡಲಿಯ ಪ್ರತಿಯೊಬ್ಬ ಅಧಿಕಾರಿ ಅಥವಾ ನೌಕರನು ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಕಾರ್ಯನಿರ್ವಹಿಸುವ ಅಥವಾ ಕಾರ್ಯನಿರ್ವಹಿಸುತ್ತಿರುವಾಗ ಅಥವಾ ಹಾಗೆಂದು ತಾತ್ಪರ್ಯವಾದಾಗ ಭಾರತೀಯ ದಂಡ ಸಂಹಿತೆಯ (1860ರ ಅಧಿನಿಯಮ ಸಂಖ್ಯೆ:45) 21ನೇ ಪ್ರಕರಣದ ಅರ್ಥ ವ್ಯಾಪ್ತಿಯೊಳಗೆ ಸಾರ್ವಜನಿಕ ನೌಕರನೆಂದು ಭಾವಿಸತಕ್ಕದ್ದು.

**102ಟಿ. ಕಾರ್ಯದರ್ಶಿಯವರು ಪತ್ರ ವ್ಯವಹಾರವನ್ನು ನಡೆಸುವುದು.–** ರಾಜ್ಯ ಸರ್ಕಾರವು, ಗ್ರೂಪ್–ಎ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಒಬ್ಬ ಅಧಿಕಾರಿಯನ್ನು ಕಾರ್ಯದರ್ಶಿಯಾಗಿ ನೇಮಿಸಬಹುದು ಮತ್ತು ಆತನು ಮಂಡಲಿಯ ಮುಖ್ಯ ಕಾರ್ಯನಿರ್ವಾಹಕನಾಗಿರತಕ್ಕದ್ದು. ಮಂಡಲಿ ಮತ್ತು ಸರ್ಕಾರ ಅಥವಾ ಇತರ ಪ್ರಾಧಿಕಾರದ ನಡುವೆ, ಈ ಅಧಿನಿಯಮದ ಮೂಲಕ ಅಥವಾ ಈ ಅಧಿನಿಯಮದ ಅಡಿಯಲ್ಲಿ ಅಥವಾ ಯಾವುದೇ ಇತರ ಕಾನೂನಿನ ಅಡಿಯಲ್ಲಿ ವ್ಯವಹರಿಸಲಾದ ಯಾವುದೇ ವಿಷಯಕ್ಕೆ ಸಂಬಂಧಿಸಿದ ಎಲ್ಲಾ ಪತ್ರ ವ್ಯವಹಾರವನ್ನು ಕಾರ್ಯದರ್ಶಿಯವರು ನಡೆಸತಕ್ಕದ್ದು ಮತ್ತು ಅಂಥ ಪತ್ರ ವ್ಯವಹಾರದ ಪ್ರತಿಯನ್ನು ಕಾರ್ಯದರ್ಶಿಯವರು ಮಂಡಲಿಯ ಅಧ್ಯಕ್ಷರಿಗೆ ಕಳುಹಿಸತಕ್ಕದ್ದು. ಕಾರ್ಯದರ್ಶಿಯು ಮಂಡಲಿಯ ಪರವಾಗಿ ದಾವೆ ಹೂಡತಕ್ಕದ್ದು ಮತ್ತು ದಾವೆಗೆ ಒಳಗಾಗತಕ್ಕದ್ದು.

**102ಯು. ದಾಖಲೆಗಳ ಅಭಿರಕ್ಷೆ.–** ಕಾರ್ಯದರ್ಶಿಯು, ಮಂಡಲಿಯ ವ್ಯವಹರಣೆಗಳಿಗೆ ಸಂಬಂಧಿಸಿದ ಎಲ್ಲಾ ಕಾಗದ ಪತ್ರಗಳು ಮತ್ತು ದಸ್ತಾವೇಜುಗಳು ಒಳಗೊಂಡಂತೆ ಎಲ್ಲಾ ದಾಖಲೆಗಳ ಅಭಿರಕ್ಷೆಗೆ ಜವಾಬ್ದಾರನಾಗಿರತಕ್ಕದ್ದು.

**102ವಿ. ಮಂಡಲಿಯ ಸಿಬ್ಬಂದಿಯ ಮೇಲೆ ನಿಯಂತ್ರಣ.–** ಈ ಅಧ್ಯಾಯದ ಮತ್ತು ಅದರ ಅಡಿಯಲ್ಲಿ ರಚಿಸಲಾದ ನಿಯಮಗಳು ಹಾಗೂ ವಿನಿಯಮಗಳ ಉಪಬಂಧಗಳಿಗೆ ಒಳಪಟ್ಟು, ಕಾರ್ಯದರ್ಶಿಯವರು, ಮಂಡಲಿಯಲ್ಲಿ ನೇಮಕಗೊಂಡಿರುವ ವ್ಯಕ್ತಿಗಳ ಕರ್ತವ್ಯಗಳನ್ನು ನಿರ್ದಿಷ್ಟಪಡಿಸತಕ್ಕದ್ದು ಮತ್ತು ಅವರ ಮೇಲೆ ಮೇಲ್ವಿಚಾರಣೆ ಮತ್ತು ನಿಯಂತ್ರಣ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅವರ ಸೇವಾ ಷರತ್ತುಗಳಿಗೆ ಸಂಬಂಧಿಸಿದ ಎಲ್ಲಾ ಪ್ರಶ್ನೆಗಳನ್ನು ತೀರ್ಮಾನಿಸತಕ್ಕದ್ದು.

**102ಡಬ್ಲ್ಯೂ. ದಾವೆಗಳ ಮೇಲೆ ನೀಡಬೇಕಾದ ನೋಟೀಸು.–** (1) ಈ ಅಧಿನಿಯಮದ ಅಥವಾ ಅದರಡಿಯಲ್ಲಿ ರಚಿಸಲಾದ ಯಾವುದೇ ನಿಯಮ ಅಥವಾ ವಿನಿಯಮವನ್ನು ಅನುಸರಿಸಿ ಮಾಡಿದ ಮಾಡಲಾಗಿದೆ ಎಂದು ತಾತ್ಪರ್ಯವಾಗುವ ಯಾವುದೇ ಕಾರ್ಯದ ಸಂಬಂಧದಲ್ಲಿ ಮಂಡಲಿಯ ವಿರುದ್ಧ ಅಥವಾ ಮಂಡಲಿಯ ಯಾವೊಬ್ಬ ಅಧಿಕಾರಿಯ ಅಥವಾ ನೌಕರನ ವಿರುದ್ಧ ಅಥವಾ ಮಂಡಳಿಯ ಆದೇಶ ಅಥವಾ ನಿರ್ದೇಶನದ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಯಾವೊಬ್ಬ ವ್ಯಕ್ತಿಯ ವಿರುದ್ಧ, ಅಥವಾ ಯಾವೊಬ್ಬ ಅಧಿಕಾರಿ ಅಥವಾ ಇತರ ನೌಕರನ ವಿರುದ್ಧ, ಮಂಡಲಿಯ ಕಛೇರಿಯಲ್ಲಿ ಲಿಖಿತ ನೋಟೀಸನ್ನು ಕೊಟ್ಟು ಎರಡು ತಿಂಗಳು ಮುಕ್ತಾಯವಾಗುವವರೆಗೆ ಮತ್ತು ಅಂಥ ಅಧಿಕಾರಿ, ನೌಕರ ಅಥವಾ ವ್ಯಕ್ತಿಯ ಸಂದರ್ಭದಲ್ಲಿ, ಆತನಿಗೆ ಅಥವಾ ಆತನ ಕಛೇರಿಗೆ ಅಥವಾ ವಾಸಿಸುವ ಸ್ಥಳದಲ್ಲಿ ಲಿಖಿತ ನೋಟೀಸು ತಲುಪಿಸಿದ್ದ ಹೊರತು ಮತ್ತು ಅಂಥ ನೋಟೀಸಿನಲ್ಲಿ ವ್ಯಾಜ್ಯ ಕಾರಣವನ್ನು ಸ್ಪಷ್ಟವಾಗಿ ತಿಳಿಸಿ ಕೋರಿದ ಪರಿಹಾರದ ಸ್ವರೂಪ, ಕ್ಲೇಮು ಮಾಡಿದ ಪರಿಹಾರದ ಮೊತ್ತ ಮತ್ತು ಉದ್ದೇಶಿತ ವಾದಿಯ ಹೆಸರು ಮತ್ತು ವಾಸಸ್ಥಳವನ್ನು ಸ್ಪಷ್ಟವಾಗಿ ಹೇಳದ ಹೊರತು, ಮತ್ತು ಅಂಥ ನೋಟೀಸು ಕೊಟ್ಟಿದೆ ಅಥವಾ ತಲುಪಿದೆ ಎಂಬ ಹೇಳಿಕೆಯನ್ನು ವಾದ ಪತ್ರವು ಒಳಗೊಂಡ ಹೊರತು, ಯಾವುದೇ ದಾವೆಯನ್ನು ಹೂಡತಕ್ಕದ್ದಲ್ಲ.

(2) (1)ನೇ ಉಪಪ್ರಕರಣದಲ್ಲಿರುವುದಾವುದೂ, ಯಾವ ದಾವೆಯಲ್ಲಿ ನಿರ್ಬಂಧಕಾಜ್ಞೆಯ ಪರಿಹಾರವನ್ನು ಮಾತ್ರವೇ ಕ್ಲೇಮು ಮಾಡಲಾಗಿದೆಯೋ ಆ ದಾವೆಯ ಉದ್ದೇಶವು ನೋಟೀಸನ್ನು ಕೊಡುವುದರಿಂದ ಅಥವಾ ದಾವೆ ಹೂಡುವುದನ್ನು ಮುಂದೂಡುವುದರಿಂದ ವಿಫಲವಾಗಬಹುದಾಗಿದ್ದರೆ, ಅದಕ್ಕೆ ಅನ್ವಯವಾಗತಕ್ಕದ್ದೆಂದು ಭಾವಿಸತಕ್ಕದ್ದಲ್ಲ.

**102ಎಕ್ಸ್. ನಿಯಮಗಳನ್ನು ರಚಿಸುವುದಕ್ಕೆ ಸರ್ಕಾರದ ಅಧಿಕಾರ.–** (1) ಸರ್ಕಾರವು, ಪೂರ್ವ ಪ್ರಕಟಣೆಯ ತರುವಾಯ, ಅಧಿಸೂಚನೆಯ ಮೂಲಕ, ಈ ಅಧ್ಯಾಯದ ಉದ್ದೇಶಗಳನ್ನು ಈಡೇರಿಸುವುದಕ್ಕೆ, ನಿಯಮಗಳನ್ನು ರಚಿಸಬಹುದು:

ಪರಂತು, ಈ ಅಧ್ಯಾಯವು ಪ್ರಾರಂಭವಾದ ತರುವಾಯ ಮೊದಲ ಬಾರಿಗೆ ರಚಿಸಲಾಗುವ ಯಾವುದೇ ನಿಯಮಕ್ಕೆ ಪೂರ್ವ ಪ್ರಕಟಣೆಯು ಅವಶ್ಯವಿರುತಕ್ಕದ್ದಲ್ಲ.

